ಪ್ರಕಟನೆ—೧

# ಹರಿಜನ್ವಾರ

(ಸಾಮಾಜಿಕ ನಾಟಕ)

ಎಳೆಗಳು ೧—೩

ಶ್ರೀರಂಗ

೧೯೩೪

ಸಾಹಿತ್ಯ ಪ್ರಕಟನ ಮಂದಿರ
ಧಾರವಾಡ

# ಪ್ರಕಾಶಕರ ಮಾತು

"**ಶ್ರೀರಂಗ**" ಇವರ ಹೆಸರು ಸಾಹಿತ್ಯಕ್ಷೇತ್ರದಲ್ಲಿ ಸಾಕಷ್ಟು ಬೆಳಕಿಗೆ ಬಂದಿದೆ; ಚಿರಪರಿಚಿತವಾಗಿದೆಯೆಂದೂ ಹೇಳಬಲ್ಲೆವು. ಇವರ ಇನ್ನುಳಿದ ಪ್ರಕಟಿತ ನಾಟಕಗಳಿಗಿಂತ ಈ ಹೆಸರಾದ ಸಮಾಜಿಕ "**ಹರಿಜನ್ವಾರ**" ನಾಟಕವು ಬಹುಜನರ ಚಿತ್ತವನ್ನು ಸೆಳೆದು ಬಿಟ್ಟಿರುವದೆಂದು ಕೇಳಿ ಈ ಪ್ರಕಾಶನದಂಥ ಬಿಗಿಯಾದ ಕಾರ್ಯವನ್ನು ಕೈಕೊಂಡಿದ್ದೇವೆ. ಕನ್ನಡ ಸಾಹಿತ್ಯದಲ್ಲಿಯೂ ಹೊಸ ಹೊಸ ತರದ ನಾಟಕಗಳು ಬಯಲಿಗೆ ಬರಹತ್ತಿ ರಂಗಭೂಮಿಯ ಸೊಬಗೂ ಹೆಚ್ಚುತ್ತ ನಡೆದಿರುವದನ್ನು ಕಂಡು ಕನ್ನಡ ನಾಡಿನ ಸಂಸ್ಕೃತಿಯ ಬೆಳೆವಣಿಗೆಯಾಗಲೆಂದು ಹಾರೈಸುವ ಅನೇಕ ಮಹನೀಯರಿಗೆ ಸಸುವಾದರೂ ಹರುಷವಾಗದಿರದೆಂದು ನಂಬಿಗೆಯಿದೆ. ಇಂಥ ಯತ್ನವು ಯಶಸ್ವಿಯಾಗಲೆಂದು ನಾವು ಕನ್ನಡ ಭಾಷಾಭಿಮಾನಿಗಳ ನೆರವನ್ನು ಅಪೇಕ್ಷಿಸುವೆವು.

| ಪಾತ್ರಗಳು | | ವಯಸ್ಸು |
|---|---|---|
| **ದೊಡ್ಡರಾಯರು** | | (೫೦) |
| **ಅಂತಪ್ಪ** | ಅವರ ಕಾರಕೂನ | (೬೨) |
| **ಶ್ಯಾಮು** | ಅವರ ಮಗ | (೨೧) |
| **ವಸಂತ** | ಶ್ಯಾಮುನ ಗೆಳೆಯ ನಟ | (೨೪) |
| **ನಬೀಸಾ॥** | ಚಿಲ್ಲರೆ ವ್ಯಾಪಾರಿ | (೪೫) |
| **ತಾತ್ಯಾಚಾರಿ** | ಉಂಡಾಡಿಗ | (೪೮) |
| **ವೇಣಕ್ಕ** | ದೊಡ್ಡರಾಯರ ಧರ್ಮಪತ್ನಿ | (೩೯) |
| **ಯಮುನಾ** | ಅಡಿಗೆಯವಳು ವಿಧವೆ | (೨೨) |

# ನನ್ನ ನುಡಿ

ನಾಟಕಕ್ಕೆ ಮುನ್ನುಡಿ ಬರೆಯುವುದು ಹೊಸತಾದ ರೂಢಿ; ಇಸ್ಕೊಬ್ಬರಿಂದ ಮುನ್ನುಡಿ ಬರೆಯಿಸುವದೇನೊ ಎಂದಿನಿಂದ ನಡೆದುಬಂದ **ರೂಢಿ**. ನಾಟಕದ ವಿಷಯವಾಗಿ ಬರೆಯುವ ಮುನ್ನುಡಿಯ ಮಾತಲ್ಲ ನಾವು ಹೇಳುವುದು, ನಾಟಕ**ದಲ್ಲಿಯ** ವಿಷಯದ ಸಂಬಂಧವಾಗಿ ಬರೆಯುವ ಮಾತು.

ಇದುವರೆಗೆ ಪ್ರಸಿದ್ಧಿಸಿದ ನಮ್ಮ ಎಲ್ಲ ನಾಟಕಗಳಿಗೂ ಇಂತಹ ಸಮಂಜಸ ವಿವೇಚನಾತ್ಮಕವಾದ ಮುನ್ನುಡಿಗಳಿವೆ. ಆದರೆ **ಹರಿಜನ್ವಾರ** ನಾಟಕಕ್ಕೆ ಮುನ್ನುಡಿ ಬೇಕೊ ಹೇಗೆ? ಈ ನಾಟಕದಲ್ಲಿಯ ವಿಷಯವು ಮಹತ್ವವಾದುದೊಂದು ಸಾಮಾಜಿಕ ಸಮಸ್ಯೆ ಇದೆ—ಎಂಬುದು ಇದೀಗ ಧಾರವಾಡ, ಬೆಳಗಾಂವಿ, ವಿಜಾಪುರ, ಬಾಗಲಕೋಟ, ಗದಗ ಮುಂತಾದ ಕನ್ನಡ ಕೇಂದ್ರಸ್ಥಾನಗಳಲ್ಲಾದ ಪ್ರಯೋಗಗಳಿಂದ ಹೇಳಬಹುದು. ನಾಟಕದಲ್ಲಿ ಚರ್ಚೆಗೆ ಆಸ್ಪದವಿಲ್ಲ, ಕಲೆಯ ಕೆಲವು ನಿಬಂಧನೆಗಳಿಂದ ನಾಟಕದಲ್ಲಿಯ ನಿರೂಪಣಕ್ಕೆ ಶಾಸ್ತ್ರೀಯ ವಾದವಿವಾದಗಳ ಸ್ವರೂಪ ಬರುವುದಿಲ್ಲ. ಆದುದರಿಂದಲೆ ನಾಟಕಕಾರನಿಗೆ—ಎಷ್ಟು ಬರೆದರೂ ತೃಪ್ತಿ ಎನ್ನಿಸದ ಕಲಾಸೇವಕನಿಗೆ—ಮುನ್ನುಡಿಯ ಆವಶ್ಯಕತೆ. ಇಷ್ಟಾದರೂ **ಹರಿಜನ್ವಾರ**ದ ಮಾತೇ ಬೇರೆಯಾಗಿದೆ. ಈ ನಾಟಕದ ವಿಷಯವಾಗಿ ಧಾರವಾಡದಲ್ಲಿ ವೈಷ್ಣವ ತಂಡಗಳಲ್ಲಿ ಬೇಗೆ ಎದ್ದು ಕರ್ನಾಟಕದಲ್ಲೆಲ್ಲ ಅದರ ಹೊಗೆಯ ವಾಸ ಬಡೆದಂತಾಗಿದೆ. ಇದಕ್ಕಿಂತಲೂ ಹೆಚ್ಚು ಬೋಧಪ್ರದವಾದ ಮುನ್ನುಡಿಯನ್ನು ಬರೆಯಬಹುದೆ? ನಾಟಕವೆಂದರೆ ಆಚಾರ–ವಿಚಾರ–ಹೀನರ ಕುಣಿದಾಟವೆಂದೂ, ಕನ್ನಡ ನಾಟಕ–ಅದರಲ್ಲೂ ಗದ್ಯನಾಟಕವೆಂದರೆ ಹುಡುಗಾಟಿಕೆ ಎಂದೂ, ಸಂಸಾರದ ದ್ವೈತಾದ್ವೈತ ಧರ್ಮಾರ್ಥಕಾಮಮೋಕ್ಷಗಳ ಹೆಣಗಾಟದಲ್ಲಿ ನಾಟಕಕ್ಕೆ ಸ್ಥಾನವಿಲ್ಲೆಂದೂ, ಇಂದು ನೋಡಿ ನಾಳೆ ಮರೆಯುವ ಹಾಳು ಹರಟೆಯೆ ನಾಟಕವೆಂದೂ ನಂಬಿದ ನಮ್ಮ ಸಮಾಜವನ್ನು ಬಂದು

ಗದ್ಯ ಕನ್ನಡ ನಾಟಕವೆ ಹೊಡೆದೆಬ್ಬಿಸಿತೆಂದರೆ—ಕಲೆಯು, ಶಿಕ್ಷಣಿಕೆಯು, ಸಾಹಿತ್ಯದ, ಪ್ರತಿಭಾ-ಪ್ರಭಾವವು ಎಂತಹದೆಂದು ಹೇಳಬೇಕು ? ಇದು ಆತ್ಮಪ್ರಶಂಸೆಯಲ್ಲ, ಸಮಾಜದ ವಿಷಯವಾಗಿ ಆಶಾವಾದವು. ಯಾವುದೇ ಕಾರಣದಿಂದಾಗಲಿ—ಇಂದು ಸಮಾಜದ ಮುಂದಾಳುಗಳೆಂದುಕೊಳ್ಳುವ ಬ್ರಾಹ್ಮಣರು—ಅಥವಾ ನಾವೇಕೆ ಹೇಳುವುದು ? ಓದುಗರು ತಾವಾಗಿಯೆ ಕಾಣಬಹುದು, ಅನುಭವಿಸಬಹುದು ಸಮಾಜದ ಚಿತ್ರವನ್ನು.

ಒಂದು ಮಾತನ್ನು ಮಾತ್ರ ನಾವಿಲ್ಲಿ ಹೇಳಬಹುದು. ಧರ್ಮದ ವಿಷಯವಾಗಿ ಚರ್ಚೆಯನ್ನು—ಧಾರ್ಮಿಕರ (ಮತ್ತು ಅವರ ಗೋತ್ರದವರಾದ ಡಾಂಭಿಕರ) ಮನಸಿಗೆ ನೋವಾಗುವಂತೆ—ಮಾಡಬಹುದೆ? ಕಲೆಗೆ ಬಂಧನೆ ಇಲ್ಲವೆಂದೇನೋ ಹೇಳಬಹುದು; ಆದರೂ ಇನ್ನೊಬ್ಬರಿಗೆ ಗಾಯ ಗೊಳಿಸುವದು ಕಲಾವಿದನಿಂದ ಶಕ್ಯವಿದೆಯೆ ?—ಎಂಬುದೊಂದು ಪ್ರಶ್ನೆಯು ವಿಷಯವಾಗಿಯೂ ಜನರು ವಿಚಾರ ಮಾಡಬೇಕಾಗಿದೆ. ಮಿಕ್ಕವರಂತೆ ನಾಟಕಕಾರನೂ ಜೀವನಪ್ರಪಂಚದಲ್ಲಿದ್ದುದರಿಂದ ಅದರಲ್ಲಿಯ ವ್ಯಕ್ತಿಗಳ ಪರಿಚಯವು ಅವನಿಗಿದೆ, ಸಂಗತಿಗಳ ಅರಿವೂ ಅವನಿಗಿದೆ. ಆದರೂ ಈ ಅವನ ಅನುಭವವು ಕಲಾಪ್ರಪಂಚದಲ್ಲಿ ಯಾವ ರೂಪದಿಂದ ಹೊರಹೊಮ್ಮುವುದು? ಅಲ್ಲಿ ವ್ಯಕ್ತಿ-ವ್ಯಕ್ತಿಗಳ ಭೇದವಿಲ್ಲ, ಸಣ್ಣಸಣ್ಣ ಸಂಗತಿಗಳ ಸ್ಮರಣೆ ಇಲ್ಲ. ಕಲಾಪ್ರಪಂಚದಲ್ಲಿ ಅದ್ವೈತದ ಸಂಸ್ಕಾರವಿದೆ—ಬಹುಧಾನಕ ದೃಷ್ಟಿ ಇದೆ, ವ್ಯಾಪಕ ವಿವೇಚನೆ ಇದೆ. ಮಾನವನ ಸ್ವಭಾವವನ್ನೆ ಅರಿತುಕೊಳ್ಳಬೇಕೆನ್ನುವ ನಾಟಕಕಾರನಿಗೆ ವೈಷ್ಣವ-ಸ್ಮಾರ್ತ, ಬ್ರಾಹ್ಮಣ-ಬ್ರಾಹ್ಮಣೇತರ, ಬಡವ-ಬಲ್ಲಿದ ಎಂಬ ಭೇದದ ಅರಿವಿಲ್ಲ. ಈ ಭೇದಗಳು ವ್ಯವಹಾರದ, ಆಚರಣೆಯ, ನಂಬಿಗೆಯ ಅನುಕೂಲತೆಗಳು; ಅಲ್ಪಜ್ಞಾನದ, ಅನುಕರಣ ಬುದ್ಧಿಯ ತಾಮಸ ಪ್ರವಾಹಗಳು. ಉನ್ನತವಾದ ದೇವನೆಂಬ ಶಕ್ತಿ—ಪರ್ವತಗಳಲ್ಲಿಯೆ ಇವುಗಳ ಉಗಮವಿದ್ದರೂ—ಇವು ಪ್ರದೇಶದ ಪರಿಕಿತಗಳ ಅನುಕೂಲತೆಗೆ ಒಳಸಿಕ್ಕು ಹರಿಯುವ ಪ್ರವಾಹಗಳು.

ಇದಲ್ಲದೆ ಧರ್ಮದ ವಿಷಯವಾಗಿ ಬರೆಯುವ ಲೇಖಕನಿಗಾಗಿಯೆ ಸಮಾಜದ ಈ ದುರಾಗ್ರಹವೆಯಾಕೆ? ಧರ್ಮದ ವಿಷಯವಾಗಿ ಕಾಯಿದೆ

ಗಳನ್ನು ಗೊತ್ತುಪಡಿಸುವ ಕಾನೂನು–ಮಂಡಳಿಗಳಿವೆ. ಅವುಗಳಿಗೆ ಯಾವ ತತ್ವದ ಮೇರೆಗೆ ಧರ್ಮದಲ್ಲಿ ಕೈ ಹಾಕುವ ಅಧಿಕಾರ ಬಂದಿದೆಯೊ ಅದೇ ತತ್ವದ ಮೇರೆಗೆ—ಅದಕ್ಕೂ ಹೆಚ್ಚು ಸಯುಕ್ತಿಕವಾಗಿ—ನಾಟಕಕಾರನ ಅಧಿಕಾರವಿದೆ. ಅವನ ಅನುಭವ ಶಕ್ತಿ, ಕಳಕಳಿಯ ಹೃದಯ—ಇವು ಕೌನ್ಸಿಲ ಮೆಂಬರರಿಗಿಲ್ಲ. ಅದೂ ಹೋಗಲಿ....ತನ್ನ ಧರ್ಮದ ಅಭಿಮಾನ ದಿಂದ ಅದನ್ನು ತಿದ್ದಿಕೊಳ್ಳಬೇಕೆನ್ನುವ ನಾಟಕಕಾರನಿಗೆ ತಪ್ಪೆ ಎಲ್ಲಿಂದ ಬಂದೀತು? ಇಂದು ಬ್ರಾಹ್ಮಣರೆಂದು (ಇಲ್ಲಿವೆ ಈ ಪ್ರಸಂಗದಲ್ಲಿ ವೈಷ್ಣವ ರೆಂದು) ಜನಿವಾರದ ಆಣೆ ಮಾಡುವವರು ಮೊದಲು ಆ ಜನಿವಾರದ ನಡುವೆ ಹುದುಗಿದ ಹೃದಯವನ್ನು ಪರೀಕ್ಷಿಸಿಕೊಳ್ಳಬೇಕು. ತಮ್ಮಲ್ಲಿ ಬ್ರಾಹ್ಮಣ್ಯದ ಯೋಗ್ಯತೆ ಇದ್ದಲ್ಲಿ ಮಾತ್ರ—ಇರುವವರಿಗೆ ಮಾತ್ರ—ಬ್ರಾಹ್ಮಣ್ಯದ ವಿಷಯವಾಗಿ ಮಾತನಾಡಲು ಅಧಿಕಾರ. ಈ ನಾಟಕದಲ್ಲಿಯ ತಾತ್ಯಾ ಚಾರಿಗೆ ಶ್ರೀಮದಾನಂದತೀರ್ಥರ ಹೆಸರನ್ನು ನಾಲಗೆಯಿಂದ ನುಡಿಯಲು ಕೂಡ ಯೋಗ್ಯತೆ ಇಲ್ಲ; ವಸಂತಸಂತಹರಿಗೆ ಟೀಕಾರಾಯರನ್ನು ವಿಚಾರ ಬೇಕೆಂಬ ಆಕಾಂಕ್ಷೆ ಮಾತ್ರ ಇದೆ; ದೊಡ್ಡರಾಯರಿಗೆ ತೋರಿಕೆ ಬೇಕು, ತತ್ವ ಬೇಡ; ಶ್ಯಾಮನಿಗೆ ಆತ್ಮವಿಶ್ವಾಸವಿಲ್ಲ; ಯಮುನೆಗೆ ಧೈರ್ಯವಿಲ್ಲ—ಆದರೆ ಕೇವಲ ಹೃದಯದ ಕಳಕಳಿಯಿದ್ದ ವೇಣಕ್ಕನೊಬ್ಬಳೇ ಕೊನೆಗೆ ಗಾಯಗೊಂಡ ಹೊಲೆಯರ ಕೂಸನ್ನು ಹಿಡಿದೆತ್ತುವಳು. ಇದೇ ಧರ್ಮದ ರಹಸ್ಯವಲ್ಲವೆ? 'ಸರ್ವಸ್ಯ ಚಾಹಂ ಹೃದಿ ಸನ್ನಿವಿಷ್ಟಃ' ಎಂದು ಹೇಳುವ ಪರಮಾತ್ಮನು ಯಾರ ಹೃದಯದಲ್ಲಿದ್ದಾನೆ? ಕೇವಲ ಹಿಂದಿನ ಕಾಲದವರ ಹೃದಯವನ್ನೇ ಎಂದಿನಿಂದಲೂ ಬಾಡಿಗೆಯ ಮನೆ ಎಂದು ಕಾಂಟ್ರ್ಯಾಕ್ಟ ಮಾಡಿಕೊಂಡಿರುವನೆ ದೇವನು? ಹಿಂದೆ ಟೀಕಾರಾಯರಂತಹರು ವಿಚಾರ ಕ್ರಾಂತಿ ಮಾಡಿದರೆ, ಇಂದು ವಸಂತಸಂತಹರು ಮಾಡಬಹುದು; ಹಿಂದಿನ ಮೀರಾಬಾಯಿಯು ಮಹಾಸಾಧ್ವಿಯಾದರೆ, ಇಂದಿನ ವೇಣಕ್ಕನೂ ಅದೇ ಯೋಗ್ಯತೆಯವಳೆ! ಹೃದಯದಲ್ಲಿ ಪರಮಾತ್ಮನಿದ್ದುಕೊಳ್ಳಬೇಕಾದರೆ ಜಾತಿ-ಕಾಲ–ಮತಗಳ ನಿರ್ಬಂಧವಿಲ್ಲ. ಇನ್ನು ಪರಮಾತ್ಮನು ಹೃದಯದಲ್ಲಿಲ್ಲ ದಿರಲು ಆ ಹೃದಯಕ್ಕೆ ಹೊಲಸಾಗಿ ಅಂಟಿಕೊಳ್ಳುವ ಜನಿವಾರದಂತಹ

ಬಾಹ್ಯ-ಚಿಹ್ನೆಗಳ ಉಪಯೋಗವೇನು ; "ತನುಬಿಸಲ್ಲಿ ಹುಸಿ ತುಂಬಿ, ಮನದೊಳಗೆ ವಿಷಯ ತುಂಬಿ, ಮನದೊಳಗೆ ಮನೆಯೊಡೆಯನಿದ್ದಾನೊ ಇಲ್ಲವೋ" ಎಂದು ೭೦೦ ವರುಷಗಳ ಹಿಂದೆ ಬಸವೇಶ್ವರರು ಕೇಳಿದ ಪ್ರಶ್ನೆಯನ್ನೆ ಇಂದೂ ಕೇಳಬೇಕಾಗಿದೆ. ಅದನ್ನು ತಕ್ಕಮಟ್ಟಿಗೆ ಕೇಳಿದೆ—ಈ 'ಹ-ರಿ-ಜ-ನ್ವಾ-ರ' ನಾಟಕದಲ್ಲಿ.

೮–೧೦–೧೯೩೪ —ಶ್ರೀರಂಗ

———

ತಾ॥ ೩–೧೧–೧೯೩೩ ರಾತ್ರಿ ಧಾರವಾಡದ ಅನ್ನಪೂರ್ಣಾ ನಾಟ್ಯಗೃಹದಲ್ಲಿ ಈ ನಾಟಕವನ್ನು ಕನ್ನಡ ನಾಟ್ಯವಿಲಾಸಿ (amateurs) ಗಳು ಮೊದಲನೆಯ ಸಲ ಆಡಿ ತೋರಿಸಿದರು. ಆಗ ಕೆಳಗೆ ಕಾಣಿಸಿದವರು ಪಾತ್ರವನ್ನು ವಹಿಸಿದ್ದರು.

| **ಪಾತ್ರವರ್ಗ** | **ನಟವರ್ಗ** |
|---|---|
| ಅಂತಪ್ಪ | ಶ್ರೀ. ಅಳವಣಿ ಎನ್. ಆರ್. |
| ವೇಣಕ್ಕ | ,, ಕುಲಕರ್ಣಿ ಕೆ. ಎ. |
| ಯಮುನಾ | ,, ಮುರನಾಳ ಎಸ್. ಜಿ. |
| ವಸಂತ | ,, ಜಾಗಿರದಾರ ಆರ್. ವ್ಹಿ. |
| ಶ್ಯಾಮು | ,, ಕಣಬರ್ಗಿಮಠ ಶಿವಶಂಕರ |
| ದೊಡ್ಡರಾಯರು | ,, ಮೆಳ್ಳೆಗಟ್ಟಿ ಜಿ. ವ್ಹಿ. |
| ತಾತ್ಯಾಚಾರಿ | ,, ಹಲಸಗಿ ಕೆ. ಜಿ. |
| ನಬೀಸಾಹೇಬ | ,, ಕಡಪಾ ಜಿ. ಆರ್. |

# ಹ-ರಿ-ಜ-ನ್ವಾ-ರ

## ಮೊದಲನೆಯ ಎಳೆ

ದೊಡ್ಡರಾಯರ ಮನೆಯ ಮುಂದಿನ ಕೋಣೆಯಲ್ಲಿ. ಸಮಯ—ಸಾಯಂಕಾಲದ ಆರು ಗಂಟೆ. ಅಂತಪ್ಪನೂ ವೇಣಕ್ಕನೂ ಕುಳಿತಿದ್ದಾರೆ. ಅಂತಪ್ಪನ ಎದುರಿಗೆ ಒಂದು ಇಳಿಜಾರಾದ ಮೇಜು (desk), ಸುತ್ತಲೂ ಕಾಗದಗಳು ಬಿದ್ದಿವೆ, ತೆರೆಯು ಮೇಲಕ್ಕೇಳುವಾಗ ಕಯ್ಯಲ್ಲಿ ಒಂದು ಕಾಗದವನ್ನು ಹಿಡಿದು-ಆಗಾಗ ತಲೆ ತೂಗುತ್ತಿರುವ. ವೇಣಕ್ಕನು ಅಕ್ಕಿಯನ್ನು ''ಆರಿಸುತ್ತಿರುವಳು''; ಅವಳು ಕುಳಿತಲ್ಲಿ ಬರಿಯ ನೆಲ; ಅಂತಪ್ಪನು ಕುಳಿತಲ್ಲಿ ಹಾಸಿದೆ. ಅವನು ಆತು ಕುಳಿತುಕೊಂಡದ್ದಲ್ಲದೆ ಇನ್ನೂ ೫-೬ ತೆಕ್ಕೆಗಳು ನಿಂತಿವೆ ಗೋಡೆಗೆ... ಪ್ರೇಕ್ಷಕರ ಬಲಬದಿಗೆ ಅಡಿಗೆಯ ಮನೆಗೆ ಹೋಗುವ ಬಾಗಿಲು; ಎದುರು ಒಳಕೋಣೆಗೆ ಹೋಗುವ ಬಾಗಿಲು; ಎಡಬದಿಗೆ ಹೊರಗಿನ ಬಾಗಿಲು.

**ಅಂತಪ್ಪ:—** (ಉಲ್ಲಾಸದಿಂದ) ಮೊನ್ನೆ ದೊಡ್ಡರಾಯರು ಹೆಣ್ಣು ಹುಡುಗೆಯರ ಸಾಲೆಗೆ ಹೋದಾಗ ಹಾಡಿ ತೋರಿಸಿದ್ದು. ಕೇಳತೀರೇನು, ವೇಣಕ್ಕಾ? ಆ ಹುಡುಗೆಯರೆ ಹಾಡಿದಾಗ ಕೇಳಬೇಕಾಗಿತ್ತು! ನನಗಂತೂ ಕಂಠ ತುಂಬಿ ಬಂದಿತ್ತು....(ಕೆಮ್ಮಿ) ಏನೋ, ದೊಡ್ಡವರ ಗುಣವರ್ಣನಾ ಅಂಬೋ ಅಭಿಮಾನದಿಂದಲೇ ಹಾಡತೀನಿ..ನನ್ನ ಸ್ವರ....(ಕೆಮ್ಮಿ ಸ್ವರದಿಂದ ಪಠಿಸುವನು) ಆಹ್ಮ...

ಸ್ವಾಗತ ನಿಮಗಿದು, ದೊಡ್ಡರಾಯರೆ
ಬಾಗಿ ನಮಿಸುವೆವು ಬಾಲೆಯರೆಲ್ಲ || ಪಲ್ಲ ||
ಮುನಿಸಿಪಾಲ್ಟಿಗೆ ಮಂಗಲಸೂತ್ರ
ಮನೆಮನೆಯೊಳಗೆಲ್ಲಾ ನಿಮ್ಮಯ ಸ್ತೋತ್ರ || ೧ ||
ಹತ್ತು ಸಲಾ ನೀವ್ ಪ್ರೆಸಿಡೆಂಟರಾಗುತ
ಹತ್ತು ಅವತಾರದ ದೇವನೆ ನಸ್ನುತ || ೨ ||
ವಿದ್ಯಾರಣ್ಯಾ ನೀವ್ ಶಾಳಾಬೋರ್ಡಿಗೆ
ಸಿದ್ಧರಾದಿರಿ ಸುವರ್ಣ–ವೃಷ್ಟಿಗೆ || ೩ ||
ದೊಡ್ಡರಾಯರೆ ನಿಮ್ಮಯ ಗುಣಗಳ
ಹೆಡ್ಡ ಮಾಸ್ತರ ನಾ ಹೊಗಳುವೆನೇನು ? || ೪ ||

ಆಂ....(ನೋಡಿ ವೇಣಕ್ಕನು ಕದಲದೆ ಕೆಳಗೆ ನೋಡುತ್ತಲೆ ಕೆಲಸದಲ್ಲಿ ತೊಡಗಿರುವ ದನ್ನು ಕಂಡು, ಲಗಬಗೆಯಿಂದ ಆ ಕಾಗದವನ್ನು ಬದಿಗಿಟ್ಟು, ಮತ್ತೊಂದು ಕಾಗದ ವನ್ನು ಮುಂದಿಟ್ಟುಕೊಂಡು, ಅಧೈರ್ಯದಿಂದ ಕೆಮ್ಮಿ, ಅಧೈರ್ಯ ಹೆಚ್ಚಾಗಿ,ಸುಳ್ಳು ನಗೆಯಿಂದ) ಅಂ....ಮುದುಕ ಆದ ಮ್ಯಾಲೆ ಮನುಷ್ಯ ಕೆಲಸಕ್ಕ ನಿರುಪಯೋಗಿ ನೋಡಿರಿ,ವೇಣಕ್ಕಾ (ಉತ್ತರವಿಲ್ಲ) ಏನೊ....ರಾಯರೂ ಅಂತೇ ಇನ್ನೂ ನನ್ನನ್ನ ಕೆಲಸಕ್ಕ ಇಟ್ಟುಕೊಂಡಾರ.

**ವೇಣಕ್ಕ**— (ಕೆಳಗೆ ನೋಡುತ್ತಲೇ) ಕೆಲಸಕ್ಕ ಬಾರದ್ದನೆಲ್ಲಾ ಕೂಡಿಹಾಕಿ ಕೊಳ್ಳೋದೊಂದು ದೊಡ್ಡ ಗುಣ ಅದೆ ಅವರಲ್ಲಿ.

**ಅಂತಪ್ಪ**:— (ನೊಂದುಕೊಂಡು) ಅಂ....ಒಂದು ಕಂದೀಲು ತಾ ಅಂತ ಹೇಳ ತೀರಾ.... ?

**ವೇಣಕ್ಕ**:— (ಮೇಲೆ ನೋಡಿ) ಕಂದೀಲು ಯಾಕ ಬೇಕಾಯಿತು ನಿಮಗ ? ಹೊರಗ ಢಾಳ ಆಗಿ ಉರೀತಾನ ಸೂರ್ಯಾ.

**ಅಂತಪ್ಪ**:— (ಹೆದರಿ) ಅಹುದು. ಆದರೆ ಇನ್ನೊಂದಿಷ್ಟು ಈ ಒಳಗಿನ ಕೆಲಸ ಉಳಿದದೆ, ಅದನ್ನ ಮುಗಿಸಿದೆನಂದರೆ—

**ವೇಣಕ್ಕ**:—ನಿಮಗ ಯಾರು ಬ್ಯಾಡಾ ಅಂತಾರ ಹೊರಗ ಕಟ್ಟೆಯ ಮ್ಯಾಲೆ ಕೂತು ಕೆಲಸ ಮಾಡಲಿಕ್ಕೆ ?..ನಮ್ಮ ಮನೆಯ ಕೆಲಸ ಏನು

ಮರ್ಯಾದಾದಿಂದ ನಡೆದದ್ದು ಅಷ್ಟರೊಳಗೆಯೆ ಆದ. . ಬಂದ ನೋಡ ತೀನಿ-ಮನೆಯ ಪರಿವೀನೇ ಇಲ್ಲ ಇವರಿಗೆ. ದಿವಸಾನದಿವಸ ಯಾವಾ ಗಲೂ ಹೊರಗ-ಹೊರಗ-ಹೊರಗೇ.

**ಅಂತಪ್ಪ:—** (ಸುಳ್ಳು ನಗೆಯಿಂದ) ನಾಳೆ ಒಂದು ದಿವಸ ಆಯಿತೂ ಅಂದರೆ ಮುಗಿಯಿತು, ವೇಣಕ್ಕಾ. ನಾಡದೇ ಇಲೆಕ್ಶನ್....ಹಂ....ಅದಕ್ಕೆಯೆ ಈ ಹೊತ್ತು ಕೆಲವು ಹೆಸರು ನೋಡಿಕೊಳ್ಳಬೇಕಾಗೇದ....ಅದಕ್ಕ ಕಂದೀಲು ಒಂದು ತಂದರೆ—

**ವೇಣಕ್ಕ:—** (ಅಣಕಿಸಿಂದ) ಕಂದೀಲು ಒಂದೇ ಸಾಕೆ? ಇದ್ಯುತ್ತಿನ ದೀಪಾನು ಹಚ್ಚಿಸತೀನಿ ಹೇಳಿದರ....ಎಲ್ಲಾ ವೈಭವ ನನ್ನದೇ ಅಲ್ಲ!.. ಹುಂ....ನಿಮ್ಮ ಕಣ್ಣು-ಮುಂದೆಯೆ ಕೂತು ಅಕ್ಕಿ ಆರಿಸತೀನಿ.... ನನಗ ಸಾಕಾಗುವ ಬೆಳಕು ನಿಮಗ ಸಾಕಾಗೋದಿಲ್ಲೇನೊ!

**ಅಂತಪ್ಪ:—** (ಹಲ್ಲು ಕಿರಿದು) ಮುದುಕ ಆದೆ ಅಂತ ಹೇಳಿದೆನಲ್ಲ, ವೇಣಕ್ಕಾ.

**ವೇಣಕ್ಕ:—** ಇವರೂ ಮುದುಕರೇ ಆದರೊ ಏನೊ! ಬುದ್ಧೀನೇ ಸರೀ ಲಿಕ್ಕೆ ಹತ್ತೇದ! (ಅಡಿಗೆಯ ಮನೆಯಲ್ಲಿ ನೋಡಿ) ಯಮುನಾ, ಒಂದು ಕಂದೀಲು ಹಚ್ಚಿಕೊಂಡು ಬಾರೆ....ಕಂದೀಲು ತಾ-ಅಂದೆ (ಜುಗುಪ್ಸೆ ಯಿಂದ) ದೇವರ ಮುಂದ ದೀಪ ಹಚ್ಚಲಿಕ್ಕೆ ಆಸ್ತಾ ಇಲ್ಲ ಇವರಿಗೆ... ಮುನಿಸಿಪಾಲ್ಟಿ ಮೆಂಬರ್ರು ಆಗೋರಂತ!.... ದೇವರು-ದಿಂಡರು, ಧರ್ಮ-ಕರ್ಮ, ಮನೆ-ಮಾರು, ಮಡಿ-ಮೈಲಿಗೆ ಬಿಟ್ಟವರಿಗೆಲ್ಲಾ ಮುನಿಸಿಪಾಲ್ಟೀನೇ ಗತೀನೊ ಏನೊ!

**ಅಂತಪ್ಪ:—** (ವಿಷಾದದಿಂದ) ಇದೇನು, ವೇಣಕ್ಕಾ! ದೊಡ್ಡರಾಯರು ಅಂದರೆ ಊರೊಳಗೆ ಎಷ್ಟು ಜನಕ್ಕೆ ತಂದೆ ಇದ್ದ ಹಾಗೆ....ವಿಶ್ವ ಕುಟುಂಬಿ ಮನಸ್ಸು ಅವರದು....ಅಂ....

**ವೇಣಕ್ಕ:—** (ಕ್ರೋಧದಿಂದ) ಅಯ್ಯೊ! ಇಪ್ಪತ್ತು ವರ್ಷ ಅವರ ಜೋಡಿ ಸಂಸಾರ ಮಾಡಿ ನನಗೆಯೆ ಗೊತ್ತಿಲ್ಲ .ಅವರ ಮನಸ್ಸು! ತಮ್ಮ ಕೆಲಸ ಸಾಧಿಸಿಕೊಳ್ಳುವಾಗ ಬೆಲ್ಲದಂತಹ ಮಾತು-ಅವರದು...ನಾನೂ

ಅವರಿಗೆ ವ್ವೋಟೊ (vote) ಪಾಟೊ ಕೊಡತೀನಿ ಅಂತ ಹೇಳತೀರಾ?.... ನನಗ ಕೇಳಿದರ ಅವರ ಕಡೆಯಿಂದ ಒಂದ ಕೆಲಸ ಆಗೋದಿಲ್ಲ.... ಮನಸ್ವಾ ಆದ ಮಾತಿಗೆ ಯಿಶ್ವಾಸಾ, ಯಿಚಾರಾ ಬೇಕಲ್ಲ.... ಅದನ್ನೆ ಕೇಳಬ್ಯಾಡಿರಿ ಅವರಲ್ಲಿ...ಮನೆಯು ಹೆಂಡಿರು ಮಕ್ಕಳನ್ನ ಮಾರಿ ಹರಿಶ್ಚಂದ್ರ ಆಗ ಬೇಕೂ ಅಂತ ಮಾಡಿಯಾರೊ ಏನೊ !

**ಅಂತಪ್ಪ:—** ಛೆ, ಛೆ, ವೇಣಕ್ಕಾ, ಸುಮ್ಮಸುಮ್ಮನೆ ಮನಸ್ಸಿಗೆ ಹಚ್ಚಿಕೊಂಡಿರುವಿರಲ್ಲ. ಇದೊಂದು ದಿವಸ ತಡೆಯಿರಿ....ನಾಳೆ ಮೆಂಬರರಾಗಿ ಆರಿಸಿ ಬಂದರೆ—

**ವೇಣಕ್ಕ:—** .......ಮುಗಿದೇ ಹೋಯಿತು ನನ್ನ ಪಾಲಿನ ಸಂಸಾರ.... ಮನೇನೇ ಬ್ಯಾಡಾಗೇದ ಅವರಿಗೆ....ಮುಂಜಾನೆಯಿಂದ ಸಂಜೆತನಕ ಮನೆತಪ್ಪಿಸಿ ಮುನಿಸಿಪಾಲ್ಟಿ ಕೆಲಸ ಅಂತ ಪಿರಿಪಿರಿ ಹೊರಗ ತಿರಗಲಿಲ್ಲಾ ಅಂದರ ನನಗ ಯೇಣಕ್ಕ ಅನ್ನಬ್ಯಾಡಿರಿ.... ತಡೆಯೋದು ಅಂತ !.... ಏಷ್ಟದು ತಡೆಯೋದು!....ಇನ್ನು ಮಗನ ಮದಿವೆ ಸಮಿಾಪ ಬಂದಿತು ....ನಾನು ಉಂಡದ್ದು ಕಂಡದ್ದು ಅಷ್ಟರೊಳಗೆಯೆ ಅದ.... ಇದ್ದ ನಾಲ್ಕ ವಸ್ತ-ಒಡಿವೆ ಸೊಸೆಗಾದರೂ ಹಾಕಲಿಕ್ಕೆ ಬರೋದು....ಅಂತ ಕಡ್ಡಿಕೊಟ್ಟು ಹೇಳಿದೆ....ಅವನ್ನೆಲ್ಲಾ ಒಯ್ದು ಎಲ್ಲಿಯೊ ಇಟ್ಟಬಿಟ್ಟರು —ನನ್ನ ಮ್ಯಾಲೆ ಯಿಶ್ವಾಸ ಇಲ್ಲದವರ ಹಾಗ....ಹುಡುಗಗೆ ವಸ್ತ-ಒಡಿವೆ ಇಡದಿದ್ದರ ಇವರ ಹುಡುಗಗ ಯಾರು ವರದಕ್ಷಿಣ ಕೊಡುವರು ಹೇಳಿರಿ?....ಅವರಿಗೇನು ಅದೆಲ್ಲ! ಮನೆಯು ಮ್ಯಾಲೆ ಮನಸ್ಸು ಇರಬೇಕಲ್ಲ ಮೊದಲು....

**ಅಂತಪ್ಪ:—** (ಎಲ್ಲ ತಿಳಿದವನಂತೆ ನಕ್ಕು) ಓಹೋ! ವೇಣಕ್ಕಾ, ವಸ್ತ-ಒಡಿವೆಯು ಸಲುವಾಗಿ ನಿಮಗ ಸಿಟ್ಟು ಬಂದದ್ದು? ಅಂ? ಅದರ ಕಾಳಜಿ ಬಿಡಿರಿ. ನಾಳೆ ಮೆಂಬರರಾಗಿ ಆರಿಸಿಬಂದರೂ ಅಂದರೆ ಹಾಂ ಹಾಂ ಅನ್ನುವದರೊಳಗೆ ಬಿಡಿಸಿಕೊಂಡು ಬರುವರು.

**ವೇಣಕ್ಕ:—** (ಚಕಿತಳಾಗಿ) ಬಿಡಿಸಿಕೊಂಡು?...ಅಯ್ಯ! ನನ್ನ ಹಣೆಬರಹ! ಹೆಂಗಸರ ವಸ್ತ ಒತ್ತಿ ಇಟ್ಟು ಮುನಸಿಪಾಲ್ಟಿ ಮೆಂಬರರಾಗುವ

ಹೌಸೇ ಇವರಿಗೆ?....ಆಯಿತು....ಇವರಿನ್ನು ಬಿಡಿಸಿಕೊಂಡು ಬರುವ ವೈಭವ ಅಷ್ಟರೊಳಗೆಯೆ ಆದ.

**ಅಂತಪ್ಪ:—** (ವ್ಯವಹಾರಜ್ಞಾನಿಯಂತೆ) ಲೋಕಸೇವಾ ಮಾಡುವವರಿಗೆ ಕೊಡ ಲಿಕ್ಕೆ ಪರಮಾತ್ಮ ಹಿಂದು-ಮುಂದು ನೋಡುವದಿಲ್ಲ, ವೇಣಕ್ಕಾ.

**ವೇಣಕ್ಕ:—** (ಅಣಕಿಸಿ) ಅಯ್ಯ, ಪರಮಾತ್ಮನ! ಬಾಯಿ ತೆರೆದು ಬೇಡಿದಾಗ ನೆರೆಮನೆಯವರು ಕೊಡೋದಿಲ್ಲ.... (ಗಾಬರಿಯಿಂದ) ಬಂಗಾರದೊಂದು ಡೊಗ್ಗಾಲ ಕೃಷ್ಣ ಇದ್ದಿತು ಮನೆಯೊಳಗ, ಅದನ್ನೂ ಒಯ್ದಾರ ಇವರು! ದೇವರನ್ನೂ ಒತ್ತಿ ಇಟ್ಟವರಿಗೆ—ಆಯಿತು....ನನಗೇನು ಮಾಡೋದು? ನನ್ನ ಕಣ್ಣು ಮುಚ್ಚುವದರೊಳಗ ದೇವರ ಶಾಪ ಈ ಮನೆಗೆ ತಗಲಲಿಲ್ಲಾ ಅಂದರ ಸಾಕು....ಅಷ್ಟೇ ನನ್ನ ಸುಖ.

**ಅಂತಪ್ಪ:—** (ತಿದ್ದುವವನಂತೆ, ತಿಳುಹಿಸುವವನಂತೆ) ಇದೇನು, ವೇಣಕ್ಕಾ, ದೊಡ್ಡರಾಯರಿಗೆ ದೇವರಲ್ಲಿ ವಿಶ್ವಾಸ ಇಲ್ಲ ಅನ್ನುವ ಹಾಗ ಮಾತಾ ಡುವಿರಲ್ಲ!

**ವೇಣಕ್ಕ:—** ನನಗೆಲ್ಲಾ ಗೊತ್ತದೆ ಇವರ ವಿಶ್ವಾಸ....ಇಪ್ಪತ್ತು ವರ್ಷ ದೊಳಗ ಒಂದು ದಿವಸ ಮೂಗು ಹಿಡಿದು ಸಂಧ್ಯಾನ ಮಾಡಿದ್ದರೆ ದೇವರಾಣೆ........ "ಮೂಗು ಹಿಡಿಯದೆ ಬಾಯಿ ತೆಗೆಯುವದು ನೋಡು-ಊಟಕ್ಕ" ಅಂತ ಮ್ಯಾಲೆ ದೊಡ್ಡಿಸ್ತನದ ಮಾತು....ಅನ್ನಿಸಿ ಕೊಳ್ಳಲಿ, ಆಡಿಸಿಕೊಳ್ಳಲಿ ಮತ್ತೆ ನಾನೇ ಹಟಹಿಡಿದು ಹಬ್ಬ-ಹುಣ್ಣಿವೆ ಗಾದರೂ ಒಬ್ಬ ಬ್ರಾಹ್ಮಣನ್ನ ಕರೀತೀನಿ ಅಂತ— ದೇವರ ತಲೆ ನೀರನಾದರೂ ಕಂಡರೆ....ಹುಂ....ಮನೆಯೊಳಗಿನ ದೇವರೇ ಸಾಕಾಗ ಲಿಲ್ಲ ಇವರಿಗೆ....ಹೊರಗಿನ ದೇವರ ಪಾಪಾನೂ ಕಟ್ಟಿಕೋತಾರ— ಹೊಲೆಯರನೆಲ್ಲಾ ಗುಡಿಯೊಳಗ ಬಿಡಬೇಕೂ ಅಂತ ಹೇಳಿ....

**ಅಂತಪ್ಪ:—** "ನನ್ನ ದೃಷ್ಟಿಯಲ್ಲಿ ಎಲ್ಲರೂ ಅಷ್ಟೆ" ಅಂತ ಹೇಳಿದ ದೇವರ ಮಾತನ್ನೆ ರಾಯರು ನಡೆಸೋದಿಲ್ಲವೆ?

**ವೇಣಕ್ಕ:—** ಸಾಕುಮಾಡಿರಿ. ಅವರ ಮಾತಿಗೆ ನೀವು ನಡಿಸತೀರಿ.... ಮುದುಕ ಆಗಿ ನಿಮ್ಮದೂ ಬುದ್ಧಿ ಹೋಯಿತು.

ಒಂದುಕೈಯಲ್ಲಿ ಕಂದೀಲು, ಮತ್ತೊಂದು ಕೈಯಲ್ಲಿ ಚಹದ ಕಪ್ಪನ್ನು ತೆಗೆದು ಕೊಂಡು ಯಮುನಾ ಬರುವಳು.

**ಅಂತಪ್ಪ.**— (ಅವಳು ಕಂದೀಲು ತನ್ನ ಹತ್ತರ ಇಡುವಾಗ) ಮುಪ್ಪಿನಿಂದ ಕಣ್ಣು ಹೋದದ್ದಂತೂ ನಿಜ ನೋಡಿರಿ.... ಅದಕ್ಕೆಯೆ ಕಂದೀಲು ಬೇಕಾಯಿತು....(ಚಹವನ್ನು ನೋಡಿ) ಎಲೆ! ಚಹಾನೂ ತಂದುಬಿಟ್ಟೆರಲ್ಲ....ಛೆ, ನನಗೇನು ಬೇಕಾಗಿದ್ದಿಲ್ಲ....ಆಯಿತು—

**ವೇಣಕ್ಕ:**—(ಯಮುನೆಗೆ) ಕಂದೀಲು ತಾ ಅಂತ ಹೇಳಿದರೆ ನಿನಗೆ **ಕಂದೀಲು ಚಾ** ಅಂತ ಕೇಳಿಸತೇನೆ?....ನೀನೂ ಮುದುಕೆ ಆದೆಯೊ ಏನು?

**ಅಂತಪ್ಪ:**— (ನಗೆಯಿಂದ) ಏನೊ—ಮುದುಕನ ಸಲುವಾಗಿ ಕಾಳಜಿ—

**ಯಮುನಾ:**— (ಹೆದರಿ) ಇಲ್ಲ....ಒಳಗೆ ಶಾಮಣ್ಣನವರು ಹೇಳಿದರು....

**ವೇಣಕ್ಕ:**— ಇಷ್ಟೊತ್ತಿಗೆ ಶ್ಯಾಮು ಮತ್ತೊಂದು ಚಹಾ ಕುಡಿದಿದ್ದನೆ? ಏನಾದರೊಂದು ಹೇಳಬ್ಯಾಡ.

**ಯಮುನಾ:**— ....ಅಲ್ಲ....ಆ ವಸಂತರಾಯರು ಬಂದಾರ........ಅವರಿಗೇ ಅಂತ....

**ಅಂತಪ್ಪ:**— ಹುಂ....(ಎಂದು ತಿರಸ್ಕಾರದ ಸಿಟ್ಟಿನಿಂದ ಮೂಗು ಏರಿಸುವನು)

**ವೇಣಕ್ಕ:**— ನಿಮಗೇನಾಯಿತು ಮೂಗು ಏರಿಸಲಿಕ್ಕೆ? ಬ್ಯಾಡಾದರ ಬಿಟ್ಟುಬಿಡಿರಿ—

**ಅಂತಪ್ಪ:**— (ಹಟದ ಹುಡುಗನಂತೆ) ಇಂತಹಾ ಅವೇಳೆಯೊಳಗೆ ನಾನು ಚಹಾ ಕುಡಿಯೋದೇ ಇಲ್ಲ—ಯಾರು ಎಷ್ಟು ಹೇಳಿದರೂ. ಅಂತಹ ಕೆಲಸ ಎಲ್ಲಾ ಆ ವಸಂತನಿಗೆಯೆ ಬಿಟ್ಟದ್ದು....ನಮ್ಮ ಶ್ಯಾಮರಾಯರಿಗೆ ಅವನ ಸಹವಾಸ ಯಾಕೊ?

**ವೇಣಕ್ಕ:**— (ಯಮುನೆಗೆ) ಇಲ್ಲಿ ಯಾಕೆ ನಿಂತುಕೊಂಡೆಯೆ ಹಾಳು–ಹರಟೆ ಕೇಳತಾ? ಚಹಾ ತಣ್ಣಗ ಮಾಡಿ ಕೊಡುವಾಕೆಯೊ ಏನು? (ಯಮುನಾ ಒಳಕೋಣೆಯೊಳಗೆ ಹೋಗುವಳು) ಆಕೆ ಇದ್ದಾಗ ನೀವು ಇಲ್ಲದ್ದು ಮಾತಾಡಬ್ಯಾಡಿರಿ.... ಏನಾಗೇದ ವಸಂತಗ, ನೀವೆಲ್ಲಾ ಇಷ್ಟು ಬೊಟ್ಟು ಮುರಿಯಲಿಕ್ಕೆ?

**ಅಂತಪ್ಪ:—** (ತಿರಸ್ಕಾರದಿಂದ) ವೇಣಕ್ಕಾ, ನೀವು ಕೇಳಬೇಕೆ ಈ ಮಾತು ? ಆ ಹುಡುಗಗ ಧರ್ಮ ಇಲ್ಲ, ಜಾತಿ ಇಲ್ಲ, ನೀತಿ ಇಲ್ಲ–ವಯಸ್ಸಿಗ ಬಂದ ಹೆಂಡತಿಯನ್ನ ಬಿಟ್ಟು ನಾಟಕದವರ ಜೋಡಿ ಕಟ್ಟಿ–

**ವೇಣಕ್ಕ:—** ಯಾರಲ್ಲಿ ಏನು ಧರ್ಮ ಉಳಿದದೆ ಅಂತ ಅವನಿಗೆ ಅನ್ನೋದು!

**ಅಂತಪ್ಪ:—** (ಆಶ್ಚರ್ಯದಿಂದ) ಅಲ್ಲ, ಇಂತಹವನಿಗೆ ಮಗಳನ್ನ ಕೊಡುವ ಹುಚ್ಚುತನ ತಾತ್ಯಾಚಾರಿಗೆ ಹೇಗೆ ಹೊಕ್ಕಿತೂ ಅಂತ !

**ವೇಣಕ್ಕ:—** ಹುಡುಗೆಯ ದೈವ–ಯಾರೇನು ಮಾಡುವದು ! (ಯಮುನಾ ಕೋಣೆಯಿಂದ ಬಂದು ಅಡಿಗೆಯ ಮನೆಯೊಳಕ್ಕೆ ಹೋಗುವಾಗ) ಏ,ಯಮುನಾ (ನಿಲ್ಲುವಳು) ಪಲ್ಲೆ, ಹುಳಿ, ಸಾರಿಗೆ ನೀ ಒಗ್ಗರಣೆ ಮಾಡಬ್ಯಾಡ. ನನ್ನ ಅಡಿಗೆಯೊಳಗೆಯೆ ಮಾಡಿಕೊಡತೀನಿ ಒಟ್ಟು ಒಗ್ಗರಣೆ. (ಯಮುನಾ ತಲೆ ತೂಗಿ ಹೋಗುವಳು) ಇಲ್ಲಾ ಅಂದರ ಎಣ್ಣಿ ಹಾಳು....ಅಡಿಗೆಯ ಮನೆಯೊಳಗೂ ಮುನಿಸಿಪಾಲ್ಟೀನೇ ಹೊಕ್ಕದೆ, ಎಲ್ಲಿ ನೋಡಿದಲ್ಲಿ ಅಂದಾ–ದುಂದಿ, ಅಸ್ತಾ–ವೆಸ್ತ!

**ಅಂತಪ್ಪ:—** (ಮತ್ತೆ ಕೆಲಸದಲ್ಲಿ ತೊಡಗಿ) ಬಹಳ ಕಷ್ಟಬಡುವ ಜೀವನ ನಿಮ್ಮದು, ವೇಣಕ್ಕಾ! ಸುಮ್ಮ ಸುಮ್ಮನೆ ಬೇರೆ ಅಡಿಗೆ ಮಾಡಿಕೊಳ್ಳ ತೀರಿ !

**ವೇಣಕ್ಕ:—** ಆಕೆಯ ಅಡಿಗೆ ಉಣ್ಣು ಅಂತೀರೊ ಏನು ನನಗೆ ? ಏನೊ.... ಗಂಡನ್ನ ಕಳೆದುಕೊಂಡ ಹುಡುಗೆ–ಯಾರು ದಿಕ್ಕಿಲ್ಲಾ ಅಂತ ಮನೆ ಯೊಳಗೆ ಇಟ್ಟುಕೊಂಡರೆ—

**ಅಂತಪ್ಪ:—** (ಮೇಲಿನಂತೆ) ಅಲ್ಲ–ಹುಡುಗೆಯ ಸ್ವಭಾವ ಸರಳ, ಮನಸ್ಸು ಗಟ್ಟಿ—

**ವೇಣಕ್ಕ:—** ಏನಿದ್ದರೇನು ? ಮಡಿಗೆ ನಡಿಯುವದೇನು ಆಕೆಯ ಅಡಿಗೆ ?

**ಅಂತಪ್ಪ:—** (ಮೇಲಿನಂತೆ) ಇದಲ್ಲದೆ ಆಕೆಯ ಕೈ ಅಡಿಗೆಯಾದರೂ ಉತ್ಕೃಷ್ಟ.

**ವೇಣಕ್ಕ:—** (ಸಾವರಿಸುತ್ತ) ನಿಮ್ಮ ಕೆಲಸಕ್ಕ ಇನ್ನೂ ಬಹಳ ಹೊತ್ತು ಇದ್ದರ ಹೇಳಿಬಿಡಿರಿ-ಸಂಕೋಚ ಇಲ್ಲದೆ. ಹತ್ತರ ಜೋಡಿ ಹನ್ನೊಂದು. ನಿಮ್ಮದೊಂದು ಊಟದ್ದೇನು ತ್ರಾಸ ಆಗೋದಿಲ್ಲ ಯಾರಿಗೂ ?

**ಅಂತಪ್ಪ:—** ಅಂ....(ಮೇಲೆ ನೋಡಿ) ಕೆಲಸ ಎಷ್ಟೊತ್ತು ಅಂತ ಕೇಳಿದಿರಾ? ಅದೇನು–ನಡೆಯೋದು ಹೀಗೆಯೆ.

**ವೇಣಕ್ಕ:—** (ಏಳುತ್ತ) ಮತ್ತೊಂದು ನಾಲ್ಕ ತಾಸು ಆಗವಲ್ಲದ್ಯಾಕ. ಇಲ್ಲಿಯೆ ಊಟ ಮಾಡುವವರಿದ್ದರ ಮೊದಲೆ ಹೇಳಿಡತಿರ್ರಿ ಅಂದೆ.... ಅಂದರ ನಮ್ಮ ಕೆಲಸಕ್ಕ ಅಡ್ಡಿ ಆಗೋದಿಲ್ಲ.

ಹಂ...ಎಂದು ಉಸಿರೆಳೆದು ಅಡಿಗೆಯ ಮನೆಗೆ ಹೋಗುವಳು. ಅಂತಪ್ಪನು ಸೋಜಿಗವೆನ್ನಿಸಿದಂತೆ ದಿಟ್ಟಿಸಿ ಮತ್ತೆ ಕೆಲಸದಲ್ಲಿ ತೊಡಗುವನು. ಒಳಕೋಣೆಯಿಂದ ''ಇದು ಗುಡಿ, ತಿಳಿಯಿತೆ''?ಎಂದು ವಸಂತನ ದನಿ. ಅದನ್ನು ಕೇಳಿ ತಿರಸ್ಕಾರದಿಂದ ಮತ್ತೆ ತನ್ಮಯನಾದವನಂತೆ ಕೆಲಸದಲ್ಲಿ ತೊಡಗಿ)

**ಅಂತಪ್ಪ:—** (ತನ್ನಷ್ಟಕ್ಕೆ ಗಟ್ಟಿಯಾಗಿ) ಒಂದು....'' ಉ ''. . (ಬರೆಯುವನು.) ....ಒಂದು . . ''ಎ'' (ಬರೆಯುವನು). ಎರಡು ''ಎ''. . ''ಉ'' ಇಲ್ಲ....

ಇಷ್ಟರಲ್ಲಿ ವಸಂತನೂ ಶ್ಯಾಮನೂ ಒಳಕೋಣೆಯಿಂದ ಬರುವರು. ವಸಂತನು ಉತ್ಸಾಹದಿಂದ ಏನನ್ನೊ ತಿಳುಹಿಸುತ್ತಿರುವನು. ಶ್ಯಾಮನು ಆತುರತೆಯಿಂದ ಕೇಳುತ್ತಿರುವನು. ಅಂತಪ್ಪನ ಲಕ್ಷ್ಯವೆಲ್ಲ ಆ ಕಡೆಗೆಯೆ.

**ವಸಂತ:—** (ವಿವರಿಸುತ್ತ) ''ಇದು ಗುಡಿ....ರಂಗಭೂಮಿಯ ಮಧ್ಯದಲ್ಲಿ ಅದರ ಬಾಗಿಲು. . ಹತ್ತಾರು ಪಾವಟಿಗೆಗಳು. . ಅಲ್ಲಿ ಎಚ್ಚರ ತಪ್ಪಿ ಬಿದ್ದಿರುವ ಆ ಹೊಲೆಯ....ಅವನ ತಲೆ ಒಡೆದು ರಕ್ತವು ಪಾವಟಿಗೆಗಳಿಂದ ಸುರಿಯುತ್ತಲಿದೆ....ಜನರೆಲ್ಲ ಅವನನ್ನು ಹೊಡೆದ ಕಲ್ಲುಗಳು ಅಲ್ಲಿಯೆ ಬಿದ್ದಿವೆ....ಕೆಲಹೊತ್ತು ನಿಃಶಬ್ದತೆ....ಒಮ್ಮೆಲೆ ಗುಡಿಯೊಳಗೆ ಮಿಂಚು....ಕೂಡಲೆ ಗುಡಿಯೊಳಗಿನಿಂದ ದಿವ್ಯ-ಆಕೃತಿಯ ಪುರುಷನೊಬ್ಬನು ಬರುವ. . ಮೆಲ್ಲಗೆ ನಡೆದು ಬಂದು ನಿಶ್ಚೇಷ್ಟನಾಗಿ ಬಿದ್ದ ಆ ಹೊಲೆಯನನ್ನು ನೋಡಿ 'ಇಂದಿಗೆ ನನ್ನ ಅವತಾರ ಮುಗಿಯಿತು. . . ಇನ್ನು ಈ ಭೂಮಿಗೆ ಇವನೇ ದೊರೆ. . ಇವನನ್ನು ಕೊಂದ ಕಲ್ಲು

ಗಳೇ ಇವನ ಗುಡಿ ಕಟ್ಟಲಿ. . ಇವನ ರಕ್ತದ ಧಾರೆಯು ಗಂಗಾ ಪ್ರವಾಹವಾಗಲಿ....ಈ ಸ್ಥಾನವು ಕ್ಷೇತ್ರವಾಗಲಿ' ಎಂದು ಮಾಯ ವಾಗುವನು. ತಟ್ಟನೆ ಅಲ್ಲಿ ಹೊಸದೊಂದು ಗುಡಿ ನಿಲ್ಲುವದು'' (ಒಮ್ಮೆಲೆ ತಡೆದು ನಕ್ಕು) ಯಾಕೆ? ಉತ್ತಮ ಟ್ರಾನ್ಸಫರ ಸೀನು (transfer scene) ಆಗುವದಿಲ್ಲವೆ?

**ಶ್ಯಾಮ:—** (ತಲೆ ತೂಗುತ್ತ) ಛೆ, ಬಹಳೇ ಹೃದಯದ್ರಾವಕ ಆಗುವದು ನೋಡು. ವಸಂತಾ, ಈ ನಾಟಕವನ್ನೆ ಮೊದಲು ಬರೆದು ಬಿಡು.

**ವಸಂತ:—** (ನಿರಾಶೆಯಿಂದ) ಅದನ್ನು ಆಡುವದಕ್ಕೆ, ಅಚ್ಚು ಹಾಕಿಸುವದಕ್ಕೆ ಹಣ ಎಲ್ಲಿದೆ?

**ಶ್ಯಾಮ:—** (ಧೈರ್ಯದಿಂದ) ಹೆದರಬೇಡ, ವಸಂತಾ. ಹರಿಜನರ ಉದ್ಧಾರ ಅಂದರೆ ನನ್ನ ತಂದೆಗೆ ಪ್ರಾಣ. . ಅವರ ಸ್ಫೂರ್ತಿದಾಯಕ ಲೆಕ್ಚರ ಗಳಿಂದ ಜನರಲ್ಲಿ ಜಾಗೃತಿ ಆಗಿದೆ....ಮೊದಲು ಬರೆ. . ನಾಡದಿನ ಇಲೆಕ್ಶನ್ ಮುಗಿಯಲಿ. . ಅವರಿಗೆ ಓದಿ ತೋರಿಸುವೆಯಂತೆ. ಒಂದು ವೇಳೆ ಮತ್ತೆ ಈ ಸಲ ಅವರೇ ಪ್ರೆಸಿಡೆಂಟರಾಗಬಹುದು. . ಬೇಕಾ ದಷ್ಟು ಹಣ ಕೂಡಿಸೋಣ

**ವಸಂತ:—** (ಅಧೈರ್ಯದಿಂದ) ಆದರೂ ಜನರಿಗೆ ಸರಿಹೋಗಬಹುದೊ ಇಲ್ಲೊ ಎಂದು ಹೆದರಿಕೆ ನನಗೆ. .

**ಶ್ಯಾಮ:—** (ನಕ್ಕು) ಅಯ್ಯೋ, ನಿನ್ನ ಹುಚ್ಚು! ವಸಂತಾ. ಜನರಿಗೆ ಅಂತ! ನನ್ನ ತಂದೆಯವರಲ್ಲಿ ಎಲ್ಲರಿಗೂ ಆದರ, ಅಭಿಮಾನ. . ಅವರು ಹೇಳಿದ್ದೇ ಪೂರ್ವ ಈ ಜನರಿಗೆ. . ಯಾವದಕ್ಕೂ ಹೆದರಬೇಡ. . ಏನೊ ನನ್ನ ತಂದೆಯಂತಹ ಸುಧಾರಕರು ಈ ಊರಲ್ಲಿ ಮುಂದಾಳು ಆದದ್ದು ನಮ್ಮಂತಹ ತರುಣರ ಸುದೈವ....ಇಂತಹ ಸಾಮಾಜಿಕ ನಾಟಕ ನೋಡಿದರಂತೂ ಅವರಿಗೆ ಬಹಳೇ ಉತ್ಸಾಹ....

**ವಸಂತ:—** (ವಿಚಾರಿಸುತ್ತ) ಅಲ್ಲ—ಅವರಿಗೆ ಯಾವ ನಾಟಕ ಮೊದಲು ತೋರಿಸ ಬೇಕು—ಋ—ಊ—?....ಯಾಕೆಂದರೆ, ಒಂದು ಪೌರಾಣಿಕ ನಾಟಕ ವನ್ನು ಬರೆದೀನಿ. .

**ಶ್ಯಾಮು:—** (ಉತ್ಸಾಹದಿಂದ) ಯಾವುದೂ ? ನನಗೆ ಹೇಳಲೇ ಇಲ್ಲವಲ್ಲ ಇಂದಿನ ತನಕ.

**ವಸಂತ:—** ದ್ರೌಪದೀಹರಣ—

**ಶ್ಯಾಮು:—** ಓಹೊ! ಅದೂ ನೀನ-ನೀನರಿ ಚನ್ನಾಗಿ ಆಗುವದು ನೋಡು– ವಿಶೇಷ ದ್ರೌಪದಿಯು ವಸ್ತ್ರ ಸೆಳೆಯುವಾಗ–

**ವಸಂತ:—** ದ್ರೌಪದೀವಸ್ತ್ರಾಪಹರಣ ಅಲ್ಲೊ, ನಾನು ಬರೆದದ್ದು; ದ್ರೌಪದೀಹರಣ. ಅದೇನೊ-ಹಿಂದಿನ ಯುಗದೊಳಗೆ ದುಃಶಾಸನ ದ್ರೌಪದಿಯು ವಸ್ತ್ರ ಸೆಳೆಯುವಾಗ ವೇಳೆಗೆ ಒದಗುವ ಒಬ್ಬ ದೇವ ಇದ್ದ-ಎಲ್ಲ ಸರಿಯಾಗಿ ಸಾಗತಿತ್ತು. ಈಗೆಲ್ಲಿದ್ದಾನೆ ಅಂತಹ ದೇವರು? ಲಕ್ಷಾವಧಿ ನಾಟಕಕಾರರು ದ್ರೌಪದೀ ವಸ್ತ್ರಾಪಹರಣ ಮಾಡಿದರು, ನಾನೂ ಅದೇ ಕೆಲಸಕ್ಕೆ ತೊಡಗಬೇಕೆಂದರೆ ದ್ರೌಪದಿಗೆ ವಸ್ತ್ರಆದರೂ ಉಳಿದಿದೆಯು ಇಲ್ಲವೇ ಅಂತ—

**ಅಂತಪ್ಪ:—** (ಗಟ್ಟಿಯಾಗಿ) ರಾಮು–ರಾಮು . . ಒಂದು . . "ಉ" . . "ವಿ"... ಇಲ್ಲ. . .(ಎಂದು ಕೆಲಸದಲ್ಲಿಯೆ ತೊಡಗುವನು,

**ವಸಂತ:—** (ಮೊದಲು ಚಕಿತನಾಗಿ, ತರುವಾಯು ಮುಗುಳ್ನಗೆಯಿಂದ ಮೆಲುದನಿಯಲ್ಲಿ) ಅಯ್ಯೊ ! ವ್ಯಾಸಮಹರ್ಷಿಗೆ ಸಿಟ್ಟು ಬಂದಿತೂ ಅಂತ ತೋರತದೆ. (ಗಟ್ಟಿಯಾಗಿ) ಇದಲ್ಲದೆ, ಶ್ಯಾಮೂ, "ದುರ್ದಶಾವತಾರ" ಅಂತ ಇನ್ನೊಂದು ಪೌರಾಣಿಕ ನಾಟಕವನ್ನು–

**ಅಂತಪ್ಪ:—** (ಸಿಟ್ಟು–ಅಸಹ್ಯಗಳಿಂದ) ನಿಮ್ಮ ಈ ಹಾಳು–ಹರಟೆ ಮುಗಿದ ಮೇಲೆ ತಿಳುಹಿಸು ನನಗೆ. . ನನಗಿನ್ನೂ ಕೆಲಸ ಕೈತುಂಬಿ ಅದೆ. . ನಿಮ್ಮದು ಮುಗಿಯುವ ವರೆಗೆ ಹೊರಗೆ ನಿಂತು ಸ್ವಚ್ಛ ಹವೆಯ ನಾದರೂ ಉಸಿರಾಡಿಸತೇನಿ. . (ಕೆಲಸ ತಡೆಯುವನು).

**ವಸಂತ:—** (ನಮ್ರತೆಯ ಸೋಗಿನಿಂದ) ಅಜ್ಜ, ಅಲ್ಪಜ್ಞ–ಅಜ್ಞ – ಮಂದಮತಿ ಯಾದ ಈ ಅರ್ಭಕನು ಅರಿಯದೆ ಗಳುಹಿದ ವಚನಂಗಳಿಂದುದ್ಭವಿಸಿದ ನಿಮ್ಮ ಕೋಪಾಗ್ನಿಯೆಂಬ ದಾವಾನಲದ ದಾಹವನ್ನು ಕ್ಷಮಾ ಪಣೆಯ ಜಲ-ಬಿಂದು–ಧಾರಾಸಾರಗಳ ವರ್ಷಣೆಯಿಂದ ಆರಿಸೀಕರಿಸ

ಬೇಕು. ಒಟ್ಟು ಏನು,ಅಜ್ಜ,ಕ್ಷಮಾ ಮಾಡಬೇಕು ಅಂತ ತಾತ್ಪರ್ಯ. (ಶ್ಯಾಮನು ನಗುವನು. ಅಂತಪ್ಪನು ಸಿಟ್ಟಿನಿಂದ ಏಳಬೇಕೆನ್ನುವಷ್ಟರಲ್ಲಿ) ಅಜ್ಜ, ಕೋಪಿಸಬೇಡ. (ಅವನ ಹತ್ತಿರ ಬಂದು) ನಿನ್ನನ್ನು ಪರೀಕ್ಷಿಸಬೇಕು ಅಂತ ದುರ್ಬುದ್ಧಿ ಬಂದಿತು ನನಗೆ.

**ಅಂತಪ್ಪ**:— (ಅಸಹ್ಯದಿಂದ) ದೂರಾಗೊ, ಉದ್ಧಟ !

**ವಸಂತ**:—(ಹಟವಾರಿಯಂತೆ) ದೊಡ್ಡರಾಯರ ಸಹವಾಸದಿಂದ ಅಂತಪ್ಪನೂ ಸುಧಾರಿಸಿದ ಅಂತ ಜನರು ಆಡಿಕೊಳ್ಳುತ್ತಿದ್ದರು, ಶ್ಯಾಮೂ, ಆದರೆ ನನಗೆ ವಿಶ್ವಾಸವಿರಲಿಲ್ಲ ಆ ಮಾತಿನೊಳಗೆ....(ಅಂತಪ್ಪನು ಮಾತಾಡಲು ಹವಣಿಸಲು) ಬಿನ್ನವಿಸು–ಲಾಲಿಸು–ಅಜ್ಜ . . ಯಾವಾಗ ನಿನಗೆ ಪುರಾಣ ಕೂಡ ಹಾಳು-ಹರಟೆ ಅಂತ ತೋರಿತೊ, ಅಂದ ಮೇಲೆ ನೀನು ಸುಧಾರಿಸಿದ್ದೇ ನಿಜ, ಅಜ್ಜ.

**ಅಂತಪ್ಪ**:— ಸಾಕು ಮಾಡೊ. .

**ವಸಂತ**:— (ಅವನ ಹತ್ತಿರದಲ್ಲಿಯೆ ಕುಳಿತು) ನಿನಗೆ ಸಹಾಯ ಮಾಡಲಿಯಾ ನಿನ್ನ ಕೆಲಸದಲ್ಲಿ ?.... (ಕಾಗದಗಳನ್ನು ಒಂದೊಂದಾಗಿ ನೋಡುತ್ತ) ಹಂ.... ಇದೇನು, ಅಜ್ಜ, ಚಿತ್ರಗುಪ್ತರ ಯಾದಿ ?

**ಅಂತಪ್ಪ**:— (ತಿರಸ್ಕಾರದಿಂದ) ಉದಾಳ....ಬಿಡೊ, ಅದನ್ನ . . ಅದು ಮುನಿಸಿಪಾಲ್ಟಿ voter (ವ್ಹೋಟರ) list (ಲಿಸ್ಟ).

**ಶ್ಯಾಮ**:— (ಒಮ್ಮೆಲೆ) ಹಾಗಾದರೆ ನಡೆ, ವಸಂತಾ....ಇಲೆಕ್ಶನದ ಕೆಲಸ ಅದು....ಅವರಿಗೆ ಯಾಕೆ ಅಡ್ಡಿ ಮಾಡುವದು ? ಒಳಗೆಯೆ ಹೋಗೋಣ.

**ವಸಂತ**:— ಬಂದೆ.... (ಕಾಗದಗಳನ್ನು ನೋಡುತ್ತಲೆ) ಅಜ್ಜ, ಇಲ್ಲಿ "ಉ" "ವಿ" ಅಂತ ಬರೆದುಕೊಂಡದ್ದೇನು ? "ಉದಾಳ" "ವಿವೇಕಿ" ಅಂತಲೊ ?

**ಅಂತಪ್ಪ**:— (ಕನಿಕರ ತೋರಿಸಿ) ನಿನಗೇನು ತಿಳಿಯುವದು ಇಂತಹ ಕೆಲಸ ಎಲ್ಲ ! "ಉದಾಳಾ, ವಿವೇಕೀ" ಅಂತೆ ! (ತಿರಸ್ಕಾರದಿಂದ ನಗುವನು). "ಉ" ಅಂದರೆ ಉಪನಯನ, "ವಿ" ಅಂದರೆ ವಿವಾಹ.

**ವಸಂತ:—** (ಆಶ್ಚರ್ಯ ತೋರಿಸಿ) ಆಂ... .... ಉಪನಯನ ಆಗಿದ್ದರೆ vote ಇದೆಯೆ ? ಹಾಗಾದರೆ—

**ಅಂತಪ್ಪ:—** (ಕೆರಳಿ) ತಡೆಯೊ ನಿನ್ನ ಬಾಯಿಯನ್ನ!....(ಶಿಕ್ಷಕನ ದರ್ಪದಿಂದ) ಅವೆಲ್ಲಾ ಅವರ ಮನೆಯೊಳಗಿನ ಅಡಚಣಿ—ತೊಂಗರೆ.

**ವಸಂತ:—** (ತಲೆ ತೂಗಿ) ಸುಳ್ಳಲ್ಲ ನೋಡು, ಅಜ್ಜ. ಉಪನಯನ-ವಿವಾಹ ಅಂದರ ಯಾವಾಗಲೂ ತೊಂದರೆ.

**ಅಂತಪ್ಪ:—** (ಜ್ಞಾನಿಯಂತೆ) ನಿಮ್ಮಂತಹಾ ಧರ್ಮಲಂಡರಿಗೆ!....ಹಂ.... ಅವರ ಮನೆಯೊಳಗೆ ಅವರವರ ಮಕ್ಕಳ ಉಪನಯನ-ವಿವಾಹ ಆಗುವದಿದ್ದರ-ಅದನ್ನು ಬಿಟ್ಟುಕೊಟ್ಟು ಅವರು vote ಕೊಡಲಿಕ್ಕ ಬರೋದು ಹೇಗೆ?....ಅದಕ್ಕೆ ಯಾರಾರಿಗೆ ಅಂತಹ ಅನಾನುಕೂಲತೆ ಆದೆ, ಅವರ list ಮಾಡಿ....ಹಂ....ನಡೆ, ನಡೆ, ಮಾತಿನೊಳಗ ತೊಡ ಕಿಸಬೇಡ ನನ್ನ.

**ಶ್ಯಾಮ:—** ನಡೆ....ವಸಂತಾ....ಮಹತ್ವದ ಕೆಲಸ ಅದು ... (ಅಡಿಗೆಯ ಮನೆ ಯೊಳಕ್ಕೆ ಹೊರಡುವನು)

**ಅಂತಪ್ಪ:—** ಆಂ....ಶ್ಯಾಮರಾಯರೆ, ಒಂದಿಷ್ಟು ನೀರು ಬೇಕು ನನಗ ಅಂತ ಒಳಗ ತಿಳುಹಿಸತೀರಾ ?

**ಶ್ಯಾಮ:—** (ತಿರುಗಿ ನಿಂತು)ಅಗತ್ಯ....ನಾನೇ ತಂದು ಕೊಡುವೆ (ಹೋಗುವನು)

**ಅಂತಪ್ಪ:—** ಛೆ, ಛೆ, ಯಮುನಾಬಾಯಿಗೆ ಹೇಳಿದರೆ ಸಾಕು.

**ವಸಂತ:—** (ಗಾಬರಿ ತೋರಿಸಿ) ಇದೇನು, ಅಜ್ಜ, ಯಮುನಾಬಾಯಿಯ ಕಯ್ಯಿಂದ ನೀರು ಕುಡಿಯುವೆಯಾ ?

**ಅಂತಪ್ಪ:—** (ತಿರಸ್ಕಾರದಿಂದ) ನಡೆಯೊ! ನಿನಗೆ ಯಾಕ ಬೇಕು ಎರಡನೆಯ ವರ ವ್ಯವಹಾರ ?

**ವಸಂತ:—** ಇಲ್ಲವಾದರೆ ನಾನು ನಾಟಕಾ ಹೇಗೆ ಬರೆಯಬೇಕು, ಹೇಳು, ಅಜ್ಜ.

**ಅಂತಪ್ಪ:—** (ಅಣಕಿಸಿಂದ) ಇದ್ದಾರಲ್ಲ ಊರೊಳಗ ನಿನ್ನ ಜನ! ಅವರಿಗೂ ನಿನ್ನ ನಾಟಕಕ್ಕೂ ಗಂಟು....(ತಿರಸ್ಕಾರದಿಂದ) ಆ ಅಖಂಡ ಸೌಭಾಗ್ಯ ವತಿಯರು ಮತ್ತು ಆ ಖಂಡ—

**ವಸಂತ:**— (ನಗುವೆಯೆ) ಆ ಖಂಡಸೌಭಾಗ್ಯವತಿಯರು. ಅಲ್ಲ?

**ಅಂತಪ್ಪ:**— (ಹಟದಿಂದ) ಆ ಖಂಡತುಂಡರು.

**ವಸಂತ:**— (ಏನನ್ನೊ ವಿಚಾರಿಸುವವನಂತೆ) ಹಂ ... ಈಗ ತಿಳಿಯಿತು ನನಗೆ ಯಮುನಾಬಾಯಿಯಂತಹರ ಮೇಲೆ ಯಾಕೆ ನಿಮ್ಮ ಸಿಟ್ಟು ಎಂದು. ....ಅಜ್ಜ, ಯಮುನಾಬಾಯಿಯಂತಹರಿಗೆ ಖಂಡಸೌಭಾಗ್ಯವತಿ ಅನ್ನುವರೇನು—ಅವರ ಸೌಭಾಗ್ಯ ಖಂಡ ಆಗಿದೆ ಅಂತ?

**ಅಂತಪ್ಪ:**— (ತಿರಸ್ಕಾರದಿಂದ) ಹುಂ.... ಸ್ವಾಮಿಯಾರ ಕೂಡ ಗೊತ್ತಿಲ್ಲ.... ಅಂತಹರಿಗೆ ಗಂಗಾ-ಭಾಗೀರಥೀ ಅನ್ನುವರು.

**ವಸಂತ:**— (ಆಶ್ಚರ್ಯ ತೋರಿಸಿ) ....ಆಂ....ಛೆ, ನನ್ನ ಕಲ್ಪನೆ ಬೇರೆ ಬೇರೆ ಇದ್ದಿತು ನೋಡು, ಅಜ್ಜ! ಭಗೀರಥನ ಹಾಗೆ ಜಡೆಬಿಟ್ಟುಕೊಂಡು ನಿಂತರೆ ಭಾಗೀರಥೀ, ಮೇಲೆ ಗಂಗಾ ಹಾಯ್ದು ಸ್ವಚ್ಛ ಬಿಳಿದು ತೊಳೆದುಕೊಂಡು ಹೋದರೆ ಗಂಗಾ-ಭಾಗೀರಥೀ-ಎಂದು—

**ಅಂತಪ್ಪ:**— (ಕೆರಳಿ) ಬಾಯಿ ಮುಚ್ಚೊ, ಉದ್ಧಟಾ! ಇಂತಹ ಹೇಸಿ ಮಾತುಗಳನ್ನೆ ಬರೆಯುವೆಯೇನು ನಿನ್ನ ನಾಟಕದಲ್ಲಿ?

**ವಸಂತ:**— (ನಮ್ರತೆಯ ಸೋಗಿನಿಂದ) ಇಲ್ಲಾ. ಅಂದರೆ ನಿನ್ನಂತಹರು ನೋಡಲಿಕ್ಕೆಯೆ ಬರುವದಿಲ್ಲ— ಏನು ಮಾಡಬೇಕು ಹೇಳು— ಅಜ್ಜ?

ಎಂದು ಎದ್ದು ನಿಲ್ಲುವಷ್ಟರಲ್ಲಿ ನೀರಿನ ಪಾತ್ರೆ ತೆಗೆದುಕೊಂಡು ಯಮುನಾ ಬರುವಳು.

**ಯಮುನಾ:**— (ವಸಂತನಿಗೆ) ನಿಮಗೆ ಬೇಕಾಗಿತ್ತೇನು ನೀರು?

**ಅಂತಪ್ಪ:**— (ಅಧಿಕಾರಯುಕ್ತ ವಾಣಿಯಿಂದ) ಅಲ್ಲ—ನನಗೆ. ಅವನಿಗೇನು ಬೇಕಾಗುವದು? ಬೇಕಾದರೆ, ಒಳಗೆ ಹೋಗಿ ಕುಡಿಯುವ. ಅವನಿಗೇನು ಧಾಡಿ?....(ವಸಂತನಿಗೆ) ಹೋಗು, ಒಳಗೆ ಹೋಗಿ ಕುಡಿ.

**ವಸಂತ:**— (ಆಶ್ಚರ್ಯದಿಂದ) ನನಗೆಲ್ಲಿ ಬೇಕಾಗಿದೆ ನೀರು?

**ಅಂತಪ್ಪ:**— ಹಾಗಾದರೆ ಸುಮ್ಮಸುಮ್ಮನೆ ಯಾಕೆ ಇಲ್ಲಿ ಕೂತು ನನ್ನ ಕೆಲಸಕ್ಕೆ ಅಡ್ಡಿ ಮಾಡುವೆ? ನಿರುದ್ಯೋಗಿ!

**ಯಮುನಾ:**— (ವಸಂತನಿಗೆ) ಶ್ಯಾಮಣ್ಣಾ—ಅವರು ನಿಮಗ ಇಲ್ಲಿಯೆ ಊಟ ಮಾಡಲಿಕ್ಕೆ ಹೇಳಿಯಾರ.

**ವಸಂತ:—** (ಉಸಿರೆಳೆದು) ಅನ್ನ ದೊರೆತಲ್ಲಿ ನಮ್ಮ ಛತ್ರ. (ಎಂದು ಕುಳಿತುಕೊಳ್ಳುವನು ಅಂತಪ್ಪನು ಸಿಟ್ಟಿನಿಂದ ಆವನನ್ನು ನೋಡುತ್ತ ಪಾತ್ರೆಯ ಅರ್ಧದಷ್ಟು ನೀರು ಕುಡಿದು ಪಾತ್ರೆಯನ್ನು ಕೆಳಗಿಡುವನು) ಯಮುನಾ, ಹಾಗಾದರೆ ನಿನ್ನ ಕೆಲಸ ಮುಗಿದ ಮೇಲೆ ಪುಸ್ತಕ ತೆಗೆದುಕೊಂಡು ಬಾ—ಇಲ್ಲಿಯೆ ಪಾಠ ಹೇಳುವೆ. ಮತ್ತೆ ಮನೆಯವರೆಗೆ ಬರುವ ತ್ರಾಸ ಯಾಕೆ ನಿನಗೆ? (ಯಮುನಾ ಲಗಬಗೆಯಿಂದ ಹೋಗುವಳು).

**ಅಂತಪ್ಪ:—** (ಬೆರಗಾಗಿ) ಯಾವ ಪುಸ್ತಕ?

**ವಸಂತ:—**(ನಕ್ಕು) ಸುಳ್ಳು ಹೇಳಿದೆ—ವ್ಯವಹಾರದ ರೂಢಿ ಮಾಡಿಕೊಳ್ಳಲಿಕ್ಕೆ—ಅವಳಿಗೆ ಸಂಗೀತ, ನಾಟಕ ಕಲಿಸತೀನಿ, ಅಜ್ಜ.

**ಅಂತಪ್ಪ:—** (ತಿರಸ್ಕಾರದಿಂದ) ಹಂ....ಮನೆಯು ಹೆಂಡತಿಯನ್ನ ಬಿಟ್ಟು—(ವೇಣಕ್ಕನು ಬರಲು ತಡೆಯುವನು.)

**ವೇಣಕ್ಕ:—** ಏನ ಅಸಹ್ಯ ಹರಟೆ ಹೊಡೀತೀರಿ ಸಣ್ಣ ಸಣ್ಣ ಹುಡುಗರ ಕೂಡ....ಹೀಗ ಮಾಡಿದರ ನಿಮ್ಮ ಕೆಲಸ ಎಂದಿಗೆ ಮುಗಿಯಬೇಕು? ಹಿಡಿರಿ ಅದನ್ನ ಒಂದಿಷ್ಟು ...ಒಳಗ ನಡೆಯಿರಿ‥ನನಗ ಒಂದು ಕೊಡ ಮಡಿನೀರು ಬೇಕಾಗೇದ‥ ಒದ್ದಿ ಹಚ್ಚಿಕೊಂಡು ಬಾವಿ ನೀರು ಜಗ್ಗಿ ಕೊಡಿರಿ‥ಅಷ್ಟ್ಯಾಕ ಹೆದರತೀರಿ, ಏನ ಕೈ ಕೆಡೋದಿಲ್ಲ ಒಂದು ಪುಣ್ಯಾದ ಕೆಲಸ ಮಾಡಿದರ; ಕೊಡ ಸಣ್ಣದು, ನೀರ ಮ್ಯಾಲೇ ಅವೆ....(ಅಂತಪ್ಪನು ಅನಿವಾರ್ಯವೆಂದು ಹೊರಡುವನು). ಆ ನೀರಿನ ಥಾಲಿ ಎತ್ತಿಕೊಂಡು ಬರಬಾರದೆ? ಇನ್ನ ಇಷ್ಟರಾಗೇ ಯಾರಾರು ಬಂದ ಕೂಡತಾರೋ ಇಲ್ಲಿ?....ಆ ಮ್ಯಾಲೆ ಮೈಲಿಗೆ ಎಲ್ಲ..ಏನ, ತಾಯೀ, ಮಡಿ-ಮೈಲಿಗೆ ತಿಳಿಯೋದೇ ಇಲ್ಲ‥ (ಅಂತಪ್ಪನು ನಗುವ ವಸಂತನನ್ನು ಮುರಿದು-ತಿನ್ನುವವನಂತೆ ನೋಡುತ್ತ ಥಾಲಿಯನ್ನು ತೆಗೆದುಕೊಂಡು ಹೋಗುವನು) (ಹೊರಡುತ್ತ) ವಸಂತಾ, ಶ್ಯಾಮುನ ಜೋಡಿ ಊಟಕ್ಕ ಇರುವೆಯಂತೆ, ಹೋಗಬೇಡ (ಹೋಗುವಳು)

ವಸಂತನೊಬ್ಬನೆ ನಡೆದುದಕ್ಕೆಲ್ಲ ಬೆರಗಾಗಿ—ವಿಚಾರಮಗ್ನನಾಗಿ ಅತ್ತಿಂದಿತ್ತ ತಿರುಗಾಡುವನು. ಅಡಿಗೆಯ ಮನೆಯೊಳಗಿಂದ ಶ್ಯಾಮನು ಬರುವನು. ಅವನ ಮುಖದಲ್ಲಿ

ಅಧೈರ್ಯವೂ ಆಶೆಯೂ ಒಮ್ಮೆಲೆ ಸೇರಿಕೊಂಡುದರಿಂದ ಮಗುವಿನ ಎಳೆಕಳೆಯು ಕಾಣುವದು.

**ಶ್ಯಾಮು:—** (ಹಿಂದಿನಿಂದ ಬಂದು) ಮತ್ತೆ ಯಾವ ನಾಟಕ ನಡೆದಿದೆ ?

**ವಸಂತ:—**(ಒಮ್ಮೆಲೆ ತಿರುಗಿ ನಿಂತು ನಕ್ಕು) ಕರ್ನಾಟಕ.

**ಶ್ಯಾಮು:—** ಓಹೊ ! ಇಷ್ಟರಲ್ಲಿಯೆ ಸಾಮಾಜಿಕ ನಾಟಕ ಮುಗಿಯಿತು, ಪೌರಾಣಿಕವೂ ಆಯಿತು, ಈಗ ಐತಿಹಾಸಿಕವೇನು ?

**ವಸಂತ:—** ಅಲ್ಲೊ-ಕಯ್ಯೊಳಗ ಕೆಲಸ ಇಲ್ಲದೆ, ತಲೆಯೊಳಗ ವಿಚಾರ ಇಲ್ಲದೆ ಹಾಳು ಹೊತ್ತು ಕಳೆಯೋದಕೆ ಕರ್ನಾಟಕ ಅಂತ ಹೆಸರು.

**ಶ್ಯಾಮು:—** (ಅಧೈರ್ಯದಿಂದ) ಸಾಕು ಮಾಡೊ ನಿನ್ನ ವಿನೋದ ! ಕಯ್ಯೊಳಗೆ ಕೆಲಸ ಇಲ್ಲಾ ಅಂತೆ ! ಈಗ ಒಂದು ದೊಡ್ಡ ಕೆಲಸ ಕೈಕೊಳ್ಳ ಬೇಕಾಗಿದೆ. ಅದನ್ನೆ ಹೇಳಲು ಬಂದಿರುವೆ.

**ವಸಂತ:—** (ನಗುತ್ತ) ನಾನು ಇಲ್ಲಿಯೆ ಊಟ ಮಾಡಬೇಕು ಅಂತ--

**ಶ್ಯಾಮು:—**ಅದಲ್ಲೊ ! ಈ ಹೊತ್ತು ನನಗೆ ಅಭಿಮಾನ ಇದೆ; ಒಂದು ಸತ್ಕಾರ್ಯದ ಸಿದ್ಧಿಯನ್ನು ಕೈಕೊಳ್ಳುವ ಈ ಹೊತ್ತು ನನಗೆ ಉತ್ಸಾಹ ಇದೆ. ಆವೇಶ ಇದೆ. ನನ್ನ ತಂದೆಯವರು ಕೈಕೊಂಡ ಕೆಲಸ ಕೊನೆಗಾಣಿಸಲಿಕ್ಕೆ ಇಂದು ನಾನು ಮೊದಲು ಮಾಡುವೆ ಅಂತ-ಅಲ್ಲೊ, ವಸಂತಾ, ತಂದೆಯ ಕೆಲಸ ಮುಂದೆ ನಡೆಸುವದು ಮಗನ ಕರ್ತವ್ಯ ಅಲ್ಲ ?

**ವಸಂತ:—** (ತಲೆ ತೂಗಿ ಗಾಂಭೀರ್ಯದ ಸೋಗಿನಿಂದ) ಸಂಶಯವೇನು ? ತಂದೆ ಒಂದು ಮದಿವೆಯಾದರೆ ಮಗ ಎರಡು ಮದಿವೆಯಾಗುವದು; ತಂದೆ ಮಕ್ಕಳನ್ನು ಹಡೆದರೆ, ಮಗ ಮೊಮ್ಮಕ್ಕಳನ್ನು ಹಡೆಯುವದು--

**ಶ್ಯಾಮು:—** (ಆತುರತೆ ಹೆಚ್ಚಾಗಿ) ಅಯ್ಯೊ, ನಿನ್ನ ವಿನೋದ ಹಾಳಾಗಲಿ! ಅದಲ್ಲ ನಾನು ಹೇಳುವದು. ತಂದೆ ಮಾಡಿದ ಸತ್ಕಾರ್ಯ. ಈಗ ನನ್ನ ತಂದೆ ಹರಿಜನರ ಉದ್ಧಾರಕ್ಕೆ ಟೊಂಕ ಕಟ್ಟಿದ್ದಾರೆ--

**ವಸಂತ:—** ಅದಕ್ಕೆ ನೀನು ತಲೆ ಸುತ್ತಬೇಕೆನ್ನುವೆಯಾ?

**ಶ್ಯಾಮು:**— (ಕೆರಳಿ) ಥೂ, ನಿನ್ನ ತಲೆ ಕಡಿದುಬೀಳಲಿ! ಇಂದು ನಾನೂ ಹರಿಜನರ ಉದ್ಧಾರಕ್ಕೆ ಬದ್ಧಕಂಕಣನಾಗುವೆ.

**ವಸಂತ:**— ಅಂದರೆ ಅದಕ್ಕೆ ಟೊಂಕಕಟ್ಟುವದು ಎಂಬೋ ಅರ್ಥವೇ ಅಲ್ಲ?

**ಶ್ಯಾಮು:**—(ಆವೇಶದಿಂದ) ಇಂದು ನಾನೂ ಹರಿಜನರ ಉದ್ಧಾರಕ್ಕೆ ಬದ್ಧ ಕಂಕಣನಾಗುವೆ. ಅದಕ್ಕಾಗಿ ಯಮುನಾನ ಮದುವೆ ಆಗುವೆ.

**ವಸಂತ:**—(ಬೆರಗಾಗಿ) ಆಂ ಯಮುನಾನ ಕೂಡ ಮದುವೆ! ಅದು ಹರಿಜನರ ಉದ್ಧಾರ ಹೇಗೆ? (ಶ್ಯಾಮು ಸಿಟ್ಟಿನಿಂದ ಆವೇಶದಿಂದ ತನ್ನನ್ನು ದಿಟ್ಟಿಸಲು) ಹಂ.... ಹೀಗಿದ್ದರೂ ಇರಬಹುದು....ಹೆಂಗಸರೆಲ್ಲಾ ಹರಿಜನರು.... ತಾವು ಸ್ವಚ್ಛವಾದ ಕೇರಿಯಲ್ಲಿಯೆ ತಮಗೆ ಪ್ರವೇಶವಿಲ್ಲ ಹರಿಜನರಿಗೆ; ತಾವು ಸ್ವಚ್ಛವಾದ ಮನೆಯಲ್ಲಿಯೆ ತಮಗೆ ಅಧಿಕಾರವಿಲ್ಲ ಹೆಂಗಸರಿಗೆ (ಶ್ಯಾಮುನ ಮುಖದಲ್ಲಿ ಗಾಂಭೀರ್ಯದ ಮುಗುಳ್ನಗೆಯನ್ನು ನೋಡಿ) ಛೆ, ಹೀಗೆ ಇರಲಿಕ್ಕಿಲ್ಲ...ಹಂ....ಯಮುನಾಗೆ ಬುದ್ಧಿ ಇದೆ; ಬುದ್ಧಿ ಇದ್ದವರೆಲ್ಲರೂ ಹರಿಜನರು. ಯಾರೂ ಅವರನ್ನು ಮುಟ್ಟುವಂತಿಲ್ಲ ....ಛೆ–ಇದೂ ಅಲ್ಲ?

**ಶ್ಯಾಮು:**— ಅಯ್ಯೋ! ನಿನಗೆ ಆ ವಿಷಯವೇ ತಿಳಿಯುವಂತಿಲ್ಲ. ವಸಂತಾ, ಸಮಾಜಸೇವೆ ಅಂದರೆ ನಾಟಕದ ತಮಾಷೆ ಎಂದು ತಿಳಿದಿರುವೆಯಾ? ....(ಗಂಭೀರನಾಗಿ) ಯಮುನಾ, ವಿಧವಾ ಇದ್ದಾಳೆ. ವಿಧವೆಯ ವಿವಾಹ ಎಂದರೆ ಪುನರ್ವಿವಾಹ. ಪುನರ್ವಿವಾಹವು ಶಾಸ್ತ್ರಕ್ಕೆ ವಿರುದ್ಧವಂತೆ! ಇರಲಿ–ನಾನು ಅವಳೊಡನೆ ಪುನರ್ವಿವಾಹ ಮಾಡಿಕೊಂಡೆನೆಂದರೆ ನನಗೆ ಬಹಿಷ್ಕಾರ ಇಡುವರು..ಆ ಮೇಲೆ—

**ವಸಂತ:**— (ಒಮ್ಮೆಲೆ ನಕ್ಕು)–ಆ ಮೇಲೆ ನೀನೂ ಹರಿಜನ..ಓಹೊ, ಈಗ ನನಗೆ ತಿಳಿಯಿತು.

**ಶ್ಯಾಮು:**— ಅಲ್ಲೊ—

**ವಸಂತ:**— (ಗಂಭೀರನಾಗಿ) ಆದರೂ ಒಂದು ವಿಚಾರ ನನಗೆ ತಿಳಿಯಲೊಲ್ಲದು. ಯಮುನಾಗೆ ಪುನರ್ವಿವಾಹ ಆಯಿತು, ಆದರೆ ನಿನಗೆ ಇದು ಮೊದಲನೆಯ ಮದಿವೆಯೆ ಅಲ್ಲ?.... ಅಲ್ಲೊ–ನಿನಗ ಒಂದು ಪೇಳೆ

ಬಹಿಷ್ಕಾರ ಹಾಕಲಿಲ್ಲ ಅಂತ ತಿಳಿ, ಯಾಕೆಂದರೆ ಈ ಬ್ರಾಹ್ಮಣರು ಯಾವ ವೇಳೆಗೆ ಏನು ಮಾಡುವರು ಹೇಳಲಿಕ್ಕೆ ಬರುವದಿಲ್ಲ–

**ಶ್ಯಾಮ:**— ಇಲ್ಲವಾದರೆ ಇಲ್ಲ—ಒಂದು ವಿಧವೆಯ ಉದ್ಧಾರವಾದರೂ ಆಯಿತೊ ಇಲ್ಲವೊ ?

**ವಸಂತ:**— ಹಂ....ಅಂತೂ ಯಾರದಾದರೊಬ್ಬರ ಉದ್ಧಾರದ ಬಾಣ ನಿನ್ನ ಬತ್ತಳಿಕೆಯೊಳಗೆ ಉಳಿದೇ ಉಳಿಯುವದು ಅಂದಹಾಗಾಯ್ತು.... ಅಯ್ಯೋ! ಎಂತಹ ಹುಚ್ಚ ನಾನು! ಹರಿಜನರ ಉದ್ಧಾರ ಮಾಡ ಬೇಕಾದರೆ ಮದಿವೆ ಮಾಡಿಕೊಳ್ಳಬೇಕು ಎಂಬೋ ಸಣ್ಣ ಮಾತು ತಿಳಿಯಬಾರದೆ ನನಗೆ ? ಮೇಲಾಗಿ ನಾನು ದ್ವೈತ ಸಂಪ್ರದಾಯದವ. ಲೋಕಕಾರ್ಯದ ಸಂನ್ಯಾಸಕ್ಕ ಗೃಹಸ್ಥಾಶ್ರಮ ಮುಖ್ಯ, ಜಗತ್ತಿ ನೊಳಗೆ ಗಂಡ, ಹೆಂಡತಿ ಎಂಬೋ ದ್ವೈತವೇ ಸತ್ಯ—ಎಂದು ಹೇಳುವದು ನಮ್ಮ ಮತ....ಛೆ....ಶ್ಯಾಮುೂ, ನನ್ನ ಕಲ್ಪನೆಯೆ ಬೇರೆ ಇದ್ದಿತು ನೋಡು....ಹಹ....ಇದುವರೆಗೆ ಹರಿಜನರು ಅಂದರೆ ಹರಿದು ಹಂಚಿಹೋದ ಕರ್ನಾಟಕದ ಜನ, ಉದ್ಧಾರಾ ಅಂದರೆ ಊಟದ ಆಧಾರಾ ಅಂತ ತಿಳಿದಿದ್ದೆ....ಹಹ....

**ಶ್ಯಾಮ:**—(ಅಧೈರ್ಯದಿಂದ) ಅದಿರಲೊ....ಅಲ್ಲೊ....ವಸಂತಾ, ಯಮುನಾ ಈ ಮಾತಿಗೆ ಒಪ್ಪಬಹುದೆ?

**ವಸಂತ:**— (ಒಮ್ಮೆಲೆ ಆಶ್ಚರ್ಯದಿಂದ) ಅಂದರೆ? ಇನ್ನೊ ನೀನು ಯಮುನಾಗೆ ತಿಳುಹಿಸೇ ಇಲ್ಲವೇನು ಈ ಮಾತು ?

**ಶ್ಯಾಮ:**— (ಬೇಜಾರವಾಗಿ) ಅವಳಿಗೆ ತಿಳುಹಿಸಿದ್ದರೆ ನಿನಗೆ ಯಾಕೆ ಹೇಳು ತ್ತಿದ್ದೆ ? ವಸಂತಾ, ಈ ಮದಿವೆ ಆಗಲೇಬೇಕೆಂದು ನನ್ನ ಹಟ ಇದೆ, ನಿಶ್ಚಯ ಇದೆ. ಅನಾಯಾಸವಾಗಿ ದೊರೆತ ಇಂತಹ ಸಮಾಜ ಸುಧಾರಣೆಯ ಪ್ರಸಂಗವನ್ನು ಕಳೆದುಕೊಂಡರೆ ನನ್ನ ತಂದೆಯಮನೆಗೆ ಕಲಂಕನಾಗುವೆ ನಾನು. ವಸಂತಾ, ನಿನ್ನಲ್ಲಿ ವಿಶ್ವಾಸ ಅವಳದು ಅವಳ ಆದರ ನಿನ್ನಲ್ಲಿ. ಮೇಲಾಗಿ ನಾಟಕ ಬರೆಯುವವ ನೀನು' ಜನರ ಸ್ವಭಾವ ಗೊತ್ತಿದೆ ನಿನಗೆ. ಈ ವಿಷಯ ಹೇಗೆ ಮಾತನಾಡ

ಬೇಕು ಅವಳ ಕೂಡ ಎಂಬುದು ನಿನಗೆ ಹೆಚ್ಚು ಚನ್ನಾಗಿ ಗೊತ್ತು.
ವಸಂತಾ—

**ವಸಂತ:—** (ವಿಚಾರಿಸುವವನಂತೆ) ನಾಟಕ ಬರೆಯುವವನಿಗೆ ಇದೂ ಒಂದು ಜವಾಬ್ದಾರಿ ಎಂಬುದು ನನಗೆ ಹೇಗೆ ತಿಳಿಯಲಿಲ್ಲ?..ಮದಿವೆಯ ಮಾತು ಜನರಿಗೆ ಸೇರುವದೆಂದು ನನಗೆ ಗೊತ್ತಿದೆ....ಅದಕ್ಕೆಯೆ ನಾಟಕದಲ್ಲಿ ಒಂದು ಪಾತ್ರಕ್ಕಾದರೂ ಮದಿವೆ ಮಾಡಿಕೊಟ್ಟು ಸಂಸಾರದ ಹಾದಿಗೆ ಹಚ್ಚುವೆನ್ನು.... ಆದರೂ ನಾಟಕ ಎಂದರೆ ವ್ಯವಹಾರದ ಕನ್ನಡಿ, ನಾಟಕದಲ್ಲಿ ಮದಿವೆ ಕೂಡಿಸುವವನು ವ್ಯವಹಾರದಲ್ಲಿಯೂ ಮದಿವೆಯನ್ನು ಕೂಡಿಸಬೇಕು ಎಂಬುದು— (ಒಮ್ಮೆಲೆ ತಡೆದು) ಛೆ, ಇದೇ ನನ್ನ ನಿಶ್ಚಯ....ನಾನು....(ಮತ್ತೆ ತಡೆದು) ಅಲ್ಲೊ, ಶ್ಯಾಮೂ, ನನಗೆ ಇನ್ನೊಂದು ಹೆದರಿಕೆ.... ಒಂದುವೇಳೆ ಅವಳು ನನಗೆ "ನಿಮ್ಮನ್ನೆ ಮದುವೆಯಾಗುವೆ" ಎಂದರೆ....? (ವಿಚಾರಮಗ್ನನಾಗಿ ನಿಲ್ಲುವನು)

**ಶ್ಯಾಮು:—** (ಉದ್ವೇಗದಿಂದ)ಅಯ್ಯೊ! ಇನ್ನೂ ನಿನ್ನ ವಿನೋದವೆ! ವಸಂತಾ, ಎಂತಹ ಕಠೋರ ಹೃದಯ ನಿನ್ನದು!

**ವಸಂತ:—** (ಕಳಕಳಿ ತೋರಿಸಿ) ನನ್ನ ಹೃದಯ ಕಠೋರ ಅಲ್ಲ, ಶ್ಯಾಮೂ; ಅದೇ ನನ್ನ ತೊಡಕು. ನನ್ನ ಹೃದಯ ಕಠೋರವಾಗಿದ್ದರೆ ಅವಳನ್ನು ನಿರ್ಭಯದಿಂದ ನಿರಾಕರಿಸುತ್ತಿದ್ದೆ. (ಒಮ್ಮೆಲೆ ವಿಚಾರ ಹೊಳೆದು)ಓಹೊ! ಇದೊಂದು ಉತ್ತಮವಾದ ಕತೆಯಾಗುವದು ನಾಟಕಕ್ಕೆ! ಇಬ್ಬರು ಗೆಳೆಯರು, ಒಂದೇ ಹುಡುಗೆಯ ಕೂಡ ಮದಿವೆಯಾಗಬೇಕೆಂದು ಅವರ ಆಸೆ.

**ಶ್ಯಾಮು:—** (ಬೇಜಾರನಾಗಿ) ಅಯ್ಯೊ, ನಿನ್ನ ನಾಟಕ ಹಾಳಾಗಲಿ. ಸಮಾಜ ಸುಧಾರಣೆಯಂತಹ ಸತ್ಕಾರ್ಯದ ಹಂಚಿಕೆ ನಡೆದಾಗಲೂ ನಿನಗೆ ನಾಟಕದ ಚಿಂತೆ!

**ವಸಂತ:—** ಅದಲ್ಲ, ಶ್ಯಾಮೂ, ಒಂದು ವೇಳೆ ನಿನ್ನ ತಂದೆಗೆ ನಿನ್ನ ಮದಿವೆ ಬೇಡಾಗಿ ಅವರು ನಿನ್ನಮೇಲೆ ಸಿಟ್ಟಾದರೆ ನನ್ನ ಆ ಸಾಮಾಜಿಕ ನಾಟಕದ ಪಾಡೇನೂ ಅಂತ ನನ್ನ ಚಿಂತೆ!

**ಶ್ಯಾಮು:**— (ತಿರಸ್ಕಾರದಿಂದ) ಸಾಮಾಜಿಕ ನಾಟಕವಂತೆ! ಸಮಾಜದ ವ್ಯಾಪಾರ ಕೂಡ ಗೊತ್ತಿಲ್ಲ ನಿನಗೆ! ನನ್ನ ತಂದೆ ವಿರೋಧಿಸುವರಂತೆ! (ಒಮ್ಮೆಲೆ ಹೊರಗೆ ಸಪ್ಪಳಾದುದನ್ನು ಕೇಳಿ ಮೆಲುದನಿಯಲ್ಲಿ) ಶ್ಶ್. ನನ್ನ ತಂದೆ ಯವರು ಹೊರಗಿನಿಂದ ಬಂದರು....ವಸಂತಾ, ಕೋಪಿಸಬೇಡ ನನ್ನ ಮೇಲೆ....ನೀನೇ ನೋಡು...ಬರಿಯ ಮಾತಾಡುವದಕ್ಕಿಂತ ಒಂದು ಪ್ರಸಂಗಕ್ಕೆ ಎದುರಿಸಿ——ಅದೇನೆ ಇರಲಿ....ನನ್ನದಂತೂ ನಿಶ್ಚಯ. ಈ ಮದಿವೆ ಆಗಲೇಬೇಕು....ನಗುವೆ ಯಾಕೊ?

**ವಸಂತ:**— ಏನೊ....ನನ್ನ ವಿಚಾರ. ಹೊರಗೆ ತಂದೆಯ ಇಲೆಕ್ಶನ್, ಒಳಗೆ ಮಗನ ಇಲೆಕ್ಶನ್....

**ಶ್ಯಾಮು:**— ಸಾಕು....ನಿನ್ನ ಈ ಹಾಳು-ಹರಟೆ ಒಳಗೆ ಹೇಳುವೆಯಂತೆ! ನಡೆ.

ಎಂದು ಅವನನ್ನು ಜಗ್ಗಿಕೊಂಡು ಒಳಕೋಣೆಗೆ ಹೋಗುವನು. ಇಷ್ಟರಲ್ಲಿ ಅವರ ಹಿಂದೆ ದೊಡ್ಡರಾಯರೂ ತಾತ್ಯಾಚಾರಿಯೂ ಬರುವರು. ರಾಯರ ಮುಖದಲ್ಲಿ ಉತ್ಸಾಹದ ಕಳೆ. ತಾತ್ಯಾಚಾರಿಯ ಮುಖದಲ್ಲಿ ಹೆದರಿಕೆಯು ಅಸಮಾಧಾನ. ರಾಯರು ಕೈಯ್ಯಲ್ಲಿಯ ಬಡಿಗೆಯನ್ನು ಮೂಲೆಯಲ್ಲಿಟ್ಟು ಟೊಪ್ಪಿಗೆಯನ್ನು ಗೂಟಕ್ಕೆ ತೂಗುಹಾಕಿ, ಕೋಟು ಬಿಚ್ಚುತ್ತ—

**ದೊಡ್ಡರಾಯರು:**— (ನಗೆಯಿಂದ) ಅಲ್ಲೊ, ತಾತ್ಯಾಚಾರಿ, ನೀನು ಕೂಡಾ ಇಷ್ಟು ಹೆದರುವದು ಅಂದರೆ ನನಗಂತೂ ನಗೆಯು ಬರುವದು ನೋಡು.

**ತಾತ್ಯಾಚಾರಿ:**— (ಅಸಮಾಧಾನದಿಂದ) ರಾಯರೆ, ನಾನು ಖಂಡತುಂಡ ಮಾತಾಡುವವ. ನಿಮಗೆ ಹೇಳತೀನಿ....ನನ್ನ ಹಾಗ ಮನೆ-ಮನೆ ತಿರುಗುವ ಪ್ರಸಂಗ ಯಾರಾರಿಗೆ ಬಂದದೆ ಅವರದೆಲ್ಲಾ ಗೋಳು ದೇವರೇ ಬಲ್ಲ! ರಾಯರ ಕೆಲಸ, ಪ್ರತಿವರ್ಷ ಮಾಡತೀವಿ, ಈ ವರ್ಷ ಆದರೂ ಸಹಜ ಹೇಳಿ ಬರೋಹಾಗ ಹೇಳಿಬರೋಣ ಅಂದರ— ನಮ್ಮನ್ನು ಮನೆಯೊಳಗ ಕಾಲ ಕೂಡ ಇಡಗೊಡುವದಿಲ್ಲ ಎಷ್ಟೋ ಜನ! ಮೊದಲು ವೆಂಕಟರಮಣಾಚಾರ್ರು ಮನೆಗೆ ಹೋದೆ.... "ಏನೊ

ತಾತ್ಯಾಚಾರಿ, ಹೊಲೆಯರ ಉಪನಯನ ಮಾಡುವ ಕಾಂಟ್ರಾಕ್ಟ ಹಿಡಿದಿರುವೀ ಅಂತಲ್ಲ! ನಿನ್ನ ಜನಿವಾರ ಮಾಡೋ ಧಂದೆ ಬೆಳೀತಪ್ಪಾ!'' ಅಂದಬಿಟ್ಟ. ಅಲ್ಲ, ರಾಯರೆ, ಆ ಮೂಲೆಯ-ಮನೆ ಮಧ್ವಾಚಾರಿ-ಆ ತುಡುಗನ ಕಡೆಯಿಂದ ಎಂತೆಂತಹ ಖಟ್ಲೆದೊಳಗ ಸಾಕ್ಷ್ಯ ಹೇಳಿಸೀಸಿ, ಖೊಟ್ಟಿ ಮೃತ್ಯುಪತ್ರದ ಸಹಿ ಮಾಡಿಸೀಸಿ—ಅವನೂ ತಿರುಗಿ ಬೀಳಬೇಕ ನಮ್ಮ ಮ್ಯಾಲೆ! ''ಏನೊ, ತಾತ್ಯಾಚಾರಿ, ಹೊಲೆಯರ ಬೀರ್‍ಯಾ ನಿಮ್ಮ ಮಠದ ದಿವಾಣ ಅಂತ— ಹೌದೇನೋ''ಂತಾನಲ್ಲ!

**ದೊಡ್ಡರಾಯರು:—** (ನಗೆಯುಂದಲೆ) ಅಂತಹಾದೇನು ಆಪತ್ತು ಬಂದಿದಿಯೊ ಇವರಿಗೆ!

**ತಾತ್ಯಾಚಾರಿ:—** (ಹಟದಿಂದ) ಆಪತ್ತು ಬಂದಿಲ್ಲ, ರಾಯರೇ, ತಂದುಕೊಂಡೀವಿ ನಮ್ಮ ನಾವೇ. ನೀವು ನಿನ್ನಿನ ಸಭಾದೊಳಗೆ 'ಹೊಲೆಯರನ್ನ ಗುಡಿಯೊಳಗೆ ಬಿಡಬೇಕೂಂ''ತ ಹೇಳಿದ್ದರ ಫಲ ಇದು!

**ದೊಡ್ಡರಾಯರು:—** ಅಲ್ಲೊ, ತಾತ್ಯಾಚಾರಿ, ನಿನಗ ತಿಳಿಯುವಾರದೇನೊ? ಸಭಾ ತುಂಬ ಹುಡುಗರಿದ್ದರು. ಅವರಿಗೆ ಉತ್ಸಾಹ ಬರಲಿ ಅಂತ ಹೇಳಿದೆ-ಹರಿ-ಜನರನ್ನ ಗುಡಿಯೊಳಗೆ—

**ತಾತ್ಯಾಚಾರಿ:—** (ಸಿಟ್ಟಿನಿಂದ) ರಾಯರೆ, ಹರಿಜನ ಅನ್ನಬೇಡಿರಿ ಆ ಹೊಲೆಯ ಮುಂಡೇ ಮಕ್ಕಳಿಗೆ. ಬೇಕಾದರ 'ಹರಜನ' ಅನ್ನರಿ-ಆ ಸ್ಮಾರ್ತರಿಗೆ ಧರ್ಮ ಇದ್ದದ್ದು ಅಷ್ಟರೊಳಗೆಯೆ ಅದೆ.

**ದೊಡ್ಡರಾಯರು:—** ಏನೆ ಇರಲಿ, ಹುಡುಗರಿಗೆ ಹುರುಪು ಕೊಡಲಿಕ್ಕೆ ಹೇಳಿದರೆ ಇವರು ಯಾಕೆ ಇಷ್ಟು ಮನಸಿಗೆ ಹಚ್ಚಿಕೊಳ್ಳಬೇಕು?

**ತಾತ್ಯಾಚಾರಿ:—** (ಇಳಿಮೋಜಿನ ಹತ್ತಿರ ಕುಳಿತು) ಅದೆಲ್ಲಾ ಸರಿ, ರಾಯರೆ. ಆದರೆ vote ಇದ್ದದ್ದು ಹುಡುಗರಿಗಲ್ಲ-ಹಿರಿಯರಿಗೆ. (ಅಲ್ಲಿ ಬಿದ್ದ ಕಾಗದಗಳನ್ನು ನೋಡಿ ಒಂದನ್ನು ಎತ್ತಿ ಹಿಡಿದು) ನೋಡಿದಿರಾ, ನಿಮ್ಮ ವಾರ್ಡ (ward) ನೊಳಗಿನ voter ರಲ್ಲಿ ತುಂಬ ವೈಷ್ಣವರು. ಅವರ ಅನುಭವ ನಿಮಗಿಲ್ಲ, ರಾಯರೇ; ಅವರ ಬಾಯಿಗೆ ತಡೆಯುವದು ಸಾವಿರ-ನಾಲಗೆಯ ಶೇಷಗೂ ಶಕ್ಯವಿಲ್ಲ. (ತಿರಸ್ಕಾರದಿಂದ) ಸಿಗರೇಟು

ಯಾಕೆ ಸೇದುವಿರಿ ಅಂದರೆ ಸ್ಮಾರ್ತರ ಭಸ್ಮ 'ಉಫ್' ಅಂತ ಊದ ತೀವಿ ಅಂತ ಉತ್ತರ ಕೊಡೋ ಜನ ಅದು!

**ದೊಡ್ಡರಾಯರು:—** (ಸಂಶಯದಿಂದ) ಅಲ್ರೊ, ನಾಳಿನ ಸಭಾಕ್ಕ "ಸನಾತನ ವೈದಿಕ ಧರ್ಮ" ಅಂತವಿಷಯ ಇಟ್ಟಿರುವೆ....ಇಷ್ಟರವರ್ಸ್ಯಾಲೆ ತಿಳಿಯುಬಾರದೇನೊ?....ಅಂ....ಅಲ್ಲ, ಆ ವೇದವ್ಯಾಸಾಚಾರ್ರು ಮಗಳ ವರದಕ್ಷಿಣೆಯ ವ್ಯವಸ್ಥಾ ಏನು ಮಾಡಿದಿ?

**ತಾತ್ಯಾಚಾರಿ:—** (ಅಸಮಾಧಾನದಿಂದಲೆ) ಹಾಗೂ ಹೀಗೂ ಗಂಡಿನವರ ಕೂಡ ನಾನೇ ಹಾಕ್ಯಾಡಿ ಲಂಂಕ್ಕೆ ನಿಲ್ಲಿಸೀನ....ಆ ವೇದವ್ಯಾಸಾಚಾರಿ ಹಾಕಿದ್ದ ತೊಡಕಾಲು. ನನಗೆ ಒಬ್ಬಳೇ ಮಗಳು—ನಮ್ಮ ಮನೆತನ ದೊಡ್ಡದು ನಾನು ೨೦೦೦ ವರದಕ್ಷಿಣೆ ಕೊಡುವವ ಅಂತ ಹಟ ಹಿಡಿದಿದ್ದ....ಅದಕ್ಕೆ ಗಂಡಿನವರಿಗೆ ಹೇಳಿದೆ "ವರದಕ್ಷಿಣೆ ಕೊಡುವವರು ನಮ್ಮ ರಾಯರು—ಅವರ ಅನುಗ್ರಹ ನಿಮಗೆ ಬೇಕಾಗಿದ್ದರೆ ನೋಡಿರಿ ಅಂದೆ"........ಅಂತೂ ಲಂಂಕ್ಕೆ ನಿಂತಿತು....ಆದರ ಹಟಕ್ಕ ಬಿದ್ದು ವೇದವ್ಯಾಸಾಚಾರಿ ತಾನೇ ಉಮೇದವಾರ ಆಗಿ ನಿಂತರೂ ನಿಲ್ಲ ಬಹುದು....ಒಟ್ಟು ಒಂದು ಸಾವಿರ ಏನ, ಅವನಿಗೆ ತಪ್ಪಿಲ್ಲ.

**ದೊಡ್ಡರಾಯರು:—** ಏನೇ ಆಗಲಿ, ಅವನ ನೂರು vote ಆದರೂ ಗಟ್ಟಿ ಆಹುದಲ್ರೊ?

**ತಾತ್ಯಾಚಾರಿ:—** (ನಿರಾಶೆಯಿಂದ) ನಾ ಏನ ಹೇಳಲಿ, ರಾಯರೆ? ಇಷ್ಟು ಮಾಡಿದರೂ ಇನ್ನೊಬ್ಬರಿಗೆ vote ಕೊಡುವ ಧೈರ್ಯ ಇದೆ ಬ್ರಾಹ್ಮಣರಲ್ಲಿ...ನೀವು ನಿನ್ನೆ ಆ ಲೆಕ್ಚರು ಹೇಳಿದ್ದಿಲ್ಲಾ ಅಂದರೆ ಮಾತ್ರ—

**ದೊಡ್ಡರಾಯರು:—** (ಕನಿಕರ ತೋರಿಸಿ) ಅಯ್ಯೊ ಹುಚ್ಚ! ಬ್ರಾಹ್ಮಣರದೂ ಬುದ್ಧಿ ಸರಿಯುಹತ್ತಿತು ನೋಡೊ. ಒಂದು ಸ್ವಲ್ಪ ವಿಚಾರ ಮಾಡಿದ್ದರೆ ನನ್ನ ಮಾತಿನ ರಹಸ್ಯ ತಿಳಿದುಬರುತ್ತಿತ್ತು....ಅಲ್ರೊ, ತಾತ್ಯಾಚಾರಿ, ನಿನಗ ಕೂಡಾ ತಿಳಿಯುಬಾರದೆ "ಹೊಲೆಯರನ್ನು ಗುಡಿಯೊಳಗ ಬಿಡಬೇಕೂಂ"ತ ನಾ ಯಾಕೆ ಹೇಳಿದೆ ಎಂಬೋದು?........ ವ್ಯವಹಾರ ನೋಡಬೇಕೊ ಇಲ್ರೊ? ಈಗ ಅಲ್ಲಲ್ಲಿ ಅಲ್ಲಲ್ಲಿ ಅಧಿಕಾರದ

ಕೆಲಸದೊಳಗ ಸೇರಹತ್ತಿಯಾರ ಹೊಲೆಯರು....ಹೀಗೆಯೆ ನಡೆದರೆ ಮುಂದ ಬ್ರಾಹ್ಮಣರ ಗತಿ ಏನು?....ಅದಕ್ಕೆ ಹೊಲೆಯರ ತಲೆಯೊಳಗೆ ಒಂದು ಹೊಸ ಹುಚ್ಚು ಸೇರಿಸಿಬಿಡುವದು ಒಳಿತಲ್ಲ?....ಹೊಲೆಯರು ಗುಡಿಗೆ ಹೋಗುವದೂ ಅಂದರೆ ಅವರನೆಲ್ಲಾ ಗುಡಿಯೊಳಗೆ ಕಟ್ಟಿ ಹಾಕಿದ ಹಾಗೆ....ಇಲ್ಲಾ ಅಂದರೆ ನಾಳೆ ಮುನಿಸಿಪಾಲಟಿ, ಲೋಕಲ್ ಬೋರ್ಡ್, ಕೌನ್ಸಿಲ್ ಎಲ್ಲಾಕಡೆ ಸೇರಿಬಿಡುವರು....ಗುಡಿಗೆ ಏನು ಮೈಲಿಗೆ ಅಂಟಿಕೊಳ್ಳುವದಿಲ್ಲವಲ್ಲ—ಅಂ....

**ತಾತ್ಯಾಚಾರಿ:—** ನನಗ ಕೇಳಿದರ, ರಾಯರೆ, ಸ್ವತಃಕ್ಕೆ ನನಗೆ ಏನೂ ಅನ್ನಿಸುವದಿಲ್ಲ. ಸದ್ಯಕ್ಕಾದರೂ ಯಾವ ಶಿಷ್ಟ ಬ್ರಾಹ್ಮಣ ಗುಡಿಗೆ ಹೋಗತಿರತಾನ? ಏನೊ....ನಾಲ್ಕು ಹುಚ್ಚು-ಹೆಂಗಸರು ತಮ್ಮ ಸಿಡಿ-ಸಿಂಗಾರ ಮೆರಿಸಿ ತೋರಿಸಲಿಕ್ಕೆ ಹೀಗ ಗುಡಿಯ ಮೇಲೆ ಸುತ್ತಿ ಮನೆಗೆ ಬರತಾರ—ಅವರನ್ನ ನೋಡಲಿಕ್ಕೆ ಅಂತ ಒಂದು ಹತ್ತು ಸಾಲೆಯ ಹುಡುಗರು ಬರತಾರ....(ವಿಚಾರಿಸಿ, ಗಂಭೀರವಾಗಿ) ಆದರೂ ಹೊಲೆಯರನೆಲ್ಲ ಗುಡಿಗೆ ಅಟ್ಟುವ ಈ ಗೂಢ ನನಗ ತಿಳಿದಿರಲಿಲ್ಲ.... (ಒಮ್ಮೆಲೆ) ಅಲ್ಲ, ರಾಯರೆ, ಮುಂದಿನ ರವಿವಾರ 'ಹರಿಜನವಾರ' ಅಂತ ಪಾಲಿಸೋಣ ಅಂತ ಹೇಳೀರಲ್ಲ!

**ದೊಡ್ಡರಾಯರು:—** (ದೊಡ್ಡಿಸ್ತನದ ನಗೆಯಿಂದ) ಮತ್ತೆ ಕೇಳುವೆಯಲ್ಲೊ? ಸಭೆಯ ಮಾತು ಸಭೆಯೊಳಗೆ, ಮನೆಯ ಮಾತು ಮನೆಯೊಳಗೆ.

**ತಾತ್ಯಾಚಾರಿ:—** ಹಂ....ಮನೆಯ ಮಾತು ಅಂದ ಕೂಡಲೆ ಸ್ಮರಣೆಗೆ ಬಂದಿತು—

**ದೊಡ್ಡರಾಯರು:—**(ನಡುವೆಯೆ) ಚಹಾ ಕುಡಿಯುವೆಯಲ್ಲ! (ಒಳಗೆ ನೋಡಿ) ಯಾರಿದ್ದೀರಿ ಒಳಗೆ? ಎರಡು——

**ತಾತ್ಯಾಚಾರಿ:—** ಛೆ, ಛೆ, ನನ್ನ ದಶಿಂದ ಮಾಡಿಸುವ ಕಾರಣ ಇಲ್ಲ, ರಾಯರೆ. ಇದ್ದರ ಕುಡೀತೀನಿ, ಇಲ್ಲಾ ಅಂದರೆ ಇಲ್ಲ; ಸುಳ್ಳೇ ಅವರಿಗೆ ಯಾಕೆ ತ್ರಾಸ?

**ದೊಡ್ಡರಾಯರು:—** (ನಗೆಯಿಂದ) ಮಾಡಿಸಿಯೆ ಕುಡಿಯೋಣ, ತಾತ್ಯಾ

ಚಾರಿ. ಇಷ್ಟು ದುಡಿದು ಬಂದೀವಿ. ನಮಗೊಂದೆರಡು ಕಪ್ಪು ಚಹಾ ಮಾಡಿ ಕೊಟ್ಟರ ಹೆಂಗಸರಿಗೇನು ಕೈ ಮುರಿಯುವದು ಅಷ್ಟ ರೊಳಗೆಯೆ ಇದೆ. (ಒಳಗೆ ನೋಡಿ) ಎರಡು ಕಪ್ಪ ಚಹಾ–ಬೇಗ.

**ತಾತ್ಯಾಚಾರಿ:—** ಅದೂ ಅಲ್ಲ–ಇನ್ನ ಮನೆಗೆ ಹೋಗಿ ಊಟ ಮಾಡು ವದು. ಚಹಾ ಯಾಕೆ ಇಷ್ಟರಲ್ಲಿ ಅಂತ....

**ದೊಡ್ಡರಾಯರು:—** ಇಲ್ಲೇ ಊಟ ಮಾಡುವೆಯಂತೆ. ನಮ್ಮಲ್ಲಿ ಊಟಕ್ಕೆ ಇನ್ನೂ ಎರಡು ತಾಸು ಅವಧಿ. . ಅಡಿಗೆಯವಳನ್ನ ಇಟ್ಟ ದ್ದರ ಸುಖ ಇದು, ತಡ ಮಾಡಿ ಊಟ ದೊರಕುವದು

**ತಾತ್ಯಾಚಾರಿ:—** ಹಂ....ಅದನ್ನೆ ಹೇಳಬೇಕೂ ಅಂತಿದ್ದೆನಲ್ಲ ? ಮನೆಯ ಮಾತು ಅಂತ ಅಂದರಿ–ನೆನಪಾಯಿತು.... (ಮೆಲುದನಿಯಲ್ಲಿ) ನಿಮ್ಮ ಅಡಿಗೆಯವಳೂ ಇಲೆಕ್ಶನದ ಲೆಕ್ಕ ಬೆಳಿಸತಾಳ ಅನ್ನೋ ಹೆದರಿಕೆ. .

**ದೊಡ್ಡರಾಯರು:—** (ತಿಳಿಯದೆ) ಏನು ?

**ತಾತ್ಯಾಚಾರಿ:—** ಅಲ್ಲ, ಬ್ರಾಹ್ಮಣ voter ರ ಮ್ಯಾಲೆ ವಿಶ್ವಾಸ ಇಡತೀರಿ, ಅದಕ್ಕೆ ಹೇಳಿದೆ. ಈ ಹೊತ್ತು ಆ ಹರಕ–ತುಟಿ ಗಾಯುವದನಾಚಾ ರಿಯ ಕಡೆಗೆ ಹೋಗಿದ್ದೆ. "ನನಗಂತೂ ಏನೂ ಆಶ್ಚರ್ಯ ಇಲ್ಲ ನೋಡು, ತಾತ್ಯಾಚಾರಿ. ಎಂದು ನಿಮ್ಮ ರಾಯರು ಮಾಳಿಗೆಯ ಹುಲ್ಲು ಮನೆಯೊಳಗೆ ಇಟ್ಟರು ಅಂದೇ ತಿಳಿದಿತ್ತು ನನಗ ಹೀಗ ಆಗ ತದ ಅಂತ."

**ದೊಡ್ಡರಾಯರು:—** (ಮತ್ತಿಷ್ಟು ತಿಳಿಯದೆ) ಮಾಳಿಗೆಯ ಹುಲ್ಲು ?

**ತಾತ್ಯಾಚಾರಿ:—** ಯಮುನಾಬಾಯಿಯಂತಹ ವಿಧವೆಯರಿಗೆ ಬ್ರಾಹ್ಮ ಣರು ಇಟ್ಟ ಹೆಸರು ಅದು....ಅವಳ ತಲೆಯ ಕೂದಲು ಮಾಳಿಗೆಯ ಹುಲ್ಲಿನ ಹಾಗ—

**ದೊಡ್ಡರಾಯರು:—** (ಅಸಹ್ಯವಾಗಿ) ಛೆ–ಇದೆಲ್ಲ ಹಾಳು–ಹರಟೆ ಯಾರಿಗೆ ಬೇಕಾಗಿದೆ ?

**ತಾತ್ಯಾಚಾರಿ:—** ಹಾಗೆ ಬಿಡುವ ಹಾಗೆ ಇಲ್ಲ, ರಾಯರೆ; ಅದೂ ನಮ್ಮ ಧರ್ಮದ ವಿರುದ್ಧ; ಅಂತಹಳಿಂದ ಮನೆಯೆಲ್ಲಾ ಮೈಲಿಗೆ ಆಯ್ತು—

**ದೊಡ್ಡರಾಯರು:—** (ತಿರಸ್ಕಾರದಿಂದ) ಅಯ್ಯೋ, ಅವರಿಗೇನು ತಿಳಿಯುವದು ಇದೆಲ್ಲ? ಅಡಿಗೆಯವರಿಗೆ ಸಂಬಳ ಕೊಡುವವರಿಗೆಯೆ ತಿಳಿಯುವದು ಆ ಗೋಳು. ಇವಳಿಗೆ ಯಾರೂ ಕೆಲಸ ಕೊಡುವದಿಲ್ಲ; ಬರಿಯ ಊಟ ಮಾಡಿ ಅಡಿಗೆ ಮಾಡುವಳು ನಮ್ಮಲ್ಲಿ. ಒಪ್ಪತ್ತೇ ಊಟ ಮಾಡಿ ಹತ್ತು ರೂಪಾಯಿ ಸಂಬಳ ಬೇಡುವವರಿಗಿಂತ ಎಷ್ಟೋ ಅಗ್ಗ. (ವೇಣಕ್ಕನು ಬರುವಳು) ಚಹಾ, ಆಯಿತೇನೆ?

**ವೇಣಕ್ಕ:—** (ಆಶ್ಚರ್ಯ ತೋರಿಸಿ) ಆಗಲಿಕ್ಕೆ ಅದೇನು ಸಕ್ಕರೆ ಮುಕ್ಕುವ ಹಾಗ ಮುಕ್ಕುವ ಪದಾರ್ಥ? ಇನ್ನೂ ೮-೧೦ ದಿವಸ ಸಾಲು ವಷ್ಟು ಅದೆ.

**ದೊಡ್ಡರಾಯರು:—** "ಆಯಿತು" ಅಂದರೆ ಮುಗಿಯಿತು, ಅಂತಲ್ಲ; ಮಾಡಿತು ಏನು ಅಂತ ಕೇಳಿದೆ. ತಿಳಿಯುವದೇ ಇಲ್ಲ.

**ವೇಣಕ್ಕ:—** ಇತ್ತಿತ್ತಲಾಗಿ ನಿಮ್ಮ ಮಾತು ಕೇಳುವ ರೂಢೀನೇ ತಪ್ಪೇದ ಮನೆಯೊಳಗ. ಅಷ್ಟ ಬ್ಯಾಗ ಹ್ಯಾಗ ತಿಳೀಬೇಕು?

**ದೊಡ್ಡರಾಯರು:—** ಅದಿರಲಿ-ಮಾಡಿತೊ ಇಲ್ಲೊ?

**ವೇಣಕ್ಕ:—** (ಕೆರಳಿ) ಅದೇನು ತನ್ನ ತಾನೇ ಮಾಡೋ ಪದಾರ್ಥ ಅಂತ ಕೇಳತೀರಾ? ಅದನ್ನ ಯಾರಾದರೂ ಒಬ್ಬರು ಮಾಡುವವರು ಬೇಕು.

**ದೊಡ್ಡರಾಯರು:—** ಚಹಾ ಮಾಡಲಿಕ್ಕೆ ಒಬ್ಬರಿಗೆ ಗತಿ ಇಲ್ಲದ ಹಾಗಾಯ್ತು ಮನೆಯೊಳಗ?

**ವೇಣಕ್ಕ:—** ಏನ ಆಗಿದೆಯೊ ಏನೊ? ಮನೆಯ ಕಾಳಜಿ ಮಾಡುವವರಿಗೇನು ಗೊತ್ತು....ಅಡಿಗೆ ಮುಗೀತಾ ಬಂದದ....ಊಟಾ ಮಾಡೋ ದಿದ್ದರ ಹೇಳಿರಿ.

**ದೊಡ್ಡರಾಯರು:—** (ಕೆರಳಿ) ಛೆ-ಊಟ! ಊಟ! ಎರಡನೆಯ ಮಹತ್ವದ ಕೆಲಸವೇ ಇಲ್ಲ-ಹೆಂಗಸರಿಗೆ. (ಅಲ್ಲಲ್ಲಿ ಬಿದ್ದ ಕಾಗದಗಳನ್ನು ನೋಡಿ) ನೋಡಿದೆಯಾ, ಒಬ್ಬರ ನೋಡಿ ಒಬ್ಬರು ಕೆಲಸ ತಪ್ಪಿಸುವರು. ಇವ ಎಲ್ಲಿ ಹೋದ ಅಂತಪ್ಪ-ಕೆಲಸ ಬಿಟ್ಟು? (ಹೆಂಡತಿಗೆ) ಅವನಿಗೆ

ಮನೆಯ ಹಾಳು ಕೆಲಸ ಹಚ್ಚಬೇಡ ಅಂತ ಎಂತ ಎಷ್ಟು ಸಲ ಹೇಳಿಲ್ಲ ನಿಮಗ ?

**ವೇಣಕ್ಕ:—** ಮನೆಯ ಕೆಲಸ ಯಾರೂ ತಪ್ಪಿ ಕೂಡಾ ಮಾಡೋದಿಲ್ಲ–ನೀವಿಷ್ಟು ಸಿಟ್ಟಿಗೆ ಬರಲಿಕ್ಕೆ ! ಒಳಗ ನಿಮ್ಮದೆಯೆ ಕೆಲಸ ಮಾಡ್ತಾನ ನಿಮ್ಮ ಊಟಕ್ಕೇ ಉಪ್ಪಿನಕಾಯಿ ಬೇಕು, ಮಡಿಯೊಳಗ ಅದ, ಭರಣಿ ನನಗ ಎತ್ತೋದಿಲ್ಲಾಂತ--

**ದೊಡ್ಡರಾಯರು:—** ಇಂತಹಾ ಪರಿಯಂಪ ಯಾರಿಗೆ ಬೇಕಾಗಿತ್ತು ಉಪ್ಪಿನಕಾಯಿ ?

**ವೇಣಕ್ಕ:—** ನಾ ಹೋದ ವ್ಯಾಲೆ ಯಾರೂ ಕೊಡೋದಿಲ್ಲ ನಿಮಗೆ ಇಷ್ಟು ನೀವು ಮನಸಿಗೆ ಹಚ್ಚಿಕೊಳ್ಳಲಿಕ್ಕೆ. ಇನ್ನೂ ನಾ ಇದ್ದೀನಿ ಅಂತ ಎಷ್ಟೋ ಸುರಳೀತ—

**ದೊಡ್ಡರಾಯರು:—** (ತಿರಸ್ಕಾರದಿಂದ) ಬಹಾಳ ಸುರಳೀತ ! ನಿನ್ನ ಎಲ್ಲಾ ಕೆಲಸ ಹೀಗೆಯೆ ! ಆವಾಗ ನಾನು ಹೇಳಿದೆ, ಕೇಳಲಿಲ್ಲ; ಅಂತಹ ಅಡಿಗೆಯಾಕೀನ್ನ ಇಟ್ಟುಕೊಂಡಿ. . ಈಗ ನಮ್ಮ ಎಲ್ಲಾ ಕೆಲಸಕ್ಕೂ ಅಡ್ಡಿ.

**ವೇಣಕ್ಕ:—** ಅವಳು ಇದ್ದಾಳ ಅಂತ ಹೋದವರು ಬಂದವರು ಹೊತ್ತಿಗೆ ಊಟ ಕಾಣ್ತಾರ. ಯಾಕರೀ, ತಾತ್ಯಾಚಾರ್ರ ?

**ದೊಡ್ಡರಾಯರು:—** ಅವನಿಗೇನು ಕೇಳುವೆ ? ಈಗ ಊರೊಳಗೆ ಇದರ ಸಲುವಾಗಿ ಎಷ್ಟು ಗೋಳು ನಡೆದದೆ, ಅವನಿಗೆಲ್ಲಾ ಗೊತ್ತದೆ....

**ತಾತ್ಯಾಚಾರಿ:—** (ಹೆದರಿಕೆಯಿಂದ) ಅದೇನು – ವೇಣಕ್ಕಾ ಅವರಿಗೆ ಗೊತ್ತಿಲ್ಲಾ ಅಂತಿಲ್ಲ. . ತಮ್ಮ ಅಡಿಗೆ ತಾವು ಬೇರೆ ಮಾಡಿಕೊಳ್ಳುತಾರಲ್ಲ. ಆದರೂ ಊರೊಳಗೆ ಕಿಂಚಿತ್ ಧರ್ಮತೊಂದರೆ—

**ವೇಣಕ್ಕ:—** ಅಯ್ಯ ! ಧರ್ಮ ! ಇವರಿಗೆ—

**ದೊಡ್ಡರಾಯರು:—** ನಾನು ಹೇಳಲಿಲ್ಲೇ ಧರ್ಮಾ ಅಂತ ! ತಾತ್ಯಾಚಾರಿ ಹೇಳ್ತಾನ ಅದನ್ನಾದರೂ ಕೇಳಿಕೊಬಾರದೆ ?

**ವೇಣಕ್ಕ—** ಯಾರು ಹೇಳಿದರೇನು ? ಎಲ್ಲಾ ಗಂಡಸರ ಧರ್ಮ ಒಂದೇ. ಹೆಂಗಸರ ಗೋಳು ಗೊತ್ತಿದ್ದರ ಮಗಳನ್ನ ಮನೆಯೊಳಗ ಇಟ್ಟಕೊಳ್ಳತಿದ್ದರೇ ತಾತ್ಯಾಚಾರಿ ? ಹೆಂಗಸರು ಇದ್ದಾರ ಅಂತ-ಬೇಡಿದಾಗ ಅನ್ನ ದೊರಕತದ. (ಒಳ-ಕೋಣೆಯಲ್ಲಿ ನೋಡಿ) ಶ್ಯಾಮಾ, ವಸಂತಾ, ನೀವೇಳಿರಿ ಊಟಕ್ಕ. ಅವರಿಗೆ ಮಹತ್ವದ ಕೆಲಸ ಅದ ಅಂತ ! (ಸಿಟ್ಟಿನಿಂದ ಯಾರನ್ನೂ ನೋಡದೆ ಹೋಗುವಳು)

**ದೊಡ್ಡರಾಯರು:—** (ಬೆಪ್ಪಾಗಿ) ಎಲ ! ಶ್ಯಾಮು ಇಲ್ಲಿಯೆ ಇದ್ದಾನೆಯೆ ?

**ತಾತ್ಯಾಚಾರಿ:—**(ಹೌಹಾರಿ) ಅಯ್ಯೊ ! ವಸಂತ ಒಳಗ ಇದ್ದನರಿ, ರಾಯರೆ !

(ತೆರೆ)

## ಮೊದಲನೆಯ ಎಳೆ ಹರಿದುದು

## ಎರಡನೆಯ ಎಳೆ

ಅದೇ ರಾತ್ರಿಯ ಹತ್ತು ಗಂಟೆ. ದೊಡ್ಡರಾಯರ ಮನೆಯಲ್ಲಿಯ ಮತ್ತೊಂದು ಕೋಣೆಯಲ್ಲಿ. ಬಲಬದಿಗೆ ಕೋಣೆಯಿಂದ ಹೊರಕ್ಕೆ ಮತ್ತೊಂದು ಕೋಣೆಗೆ ಹೋಗುವ ಬಾಗಿಲು. ಈ ಬಾಗಿಲಿನಿಂದ ಎಡಬದಿಯ ಗೋಡೆಯ ವರೆಗೆ ಹಾಸಿದೆ. ಎದುರಿನ ಗೋಡೆಗೆ ಒಂದು ಲೋಡು. ಎಡದ ಗೋಡೆಗೆ ೬-೭ ತೆಕ್ಕೆಗಳು. ಮಧ್ಯದಲ್ಲಿ ಒಂದು ಗ್ಲೋಬ ದೀಪ. ಅದರ ಹತ್ತಿರದಲ್ಲಿಯೆ ಒಂದು ತಾಟದಲ್ಲಿ ಎಲೆ-ಅಡಿಕೆ ಮುಂತಾದ ವೀಳ್ಯದ ಪದಾರ್ಥಗಳು. ತೆರೆಯು ಏಳುವಾಗ ಯಾರೂ ಇಲ್ಲ. ಇಷ್ಟರಲ್ಲಿಯೆ ಉತ್ಸುಕತೆಯ ಕಳೆಯಿಂದ ಶ್ಯಾಮನು ವಸಂತನನ್ನು ಎಳೆದುಕೊಂಡು ಬರುವನು. ಇವರಿಬ್ಬರ ಮಾತುಗಳೂ ಕೆಲಹೊತ್ತು ಯಾರಾದರೂ ಕೇಳಿಯಾರು ಎಂಬ ಹೆದರಿಕೆಯಿಂದ ಮೆಲುದನಿಯಲ್ಲಿಯೆ ನಡೆಯುವವು.

**ಶ್ಯಾಮ:**— (ಉತ್ಸುಕತೆಯಿಂದಲೆ) ಹೇಳು, ಹೇಳು, ವಸಂತಾ, ಅವಳು ಏನೇನು ಮಾಡಿದಳು ಹೇಳು. ಮೊದಲು ನೀನು ಆ ಮಾತು ಎತ್ತಿದ ಕೂಡಲೆ ತಲೆತಗ್ಗಿಸಿದಳಲ್ಲವೆ—ಲಜ್ಜೆಯಿಂದ?

**ವಸಂತ:**— (ಕೈಬಿಡಿಸಿಕೊಳ್ಳುತ್ತ) ಆ-ಮಾತು-ತೆಗೆದ-ಕೂಡಲೆ - ತಲೆ-ಎತ್ತಿದಳು-ಆಕಾಂಕ್ಷೆಯಿಂದ.

**ಶ್ಯಾಮ:**— (ಅವನ ಕೈಬಿಟ್ಟು) ಛೆ—ನನಗೆ ಗೊತ್ತಿಲ್ಲವೆ ನಿನ್ನ ವಿನೋದ?.... ನೀ ಹೇಳುವದರಲ್ಲಿ ನನ್ನ ವಿಶ್ವಾಸ ಇಲ್ಲ—ಇಲ್ಲ....(ಕನಸು ಕಂಡವನಂತೆ) ನನ್ನ ಹೆಸರು ಕೇಳಿದ ಮಾತ್ರಕ್ಕೆ ಲಜ್ಜೆಯಿಂದ ಅವಳ ಕಪೋಲಗಳು ಕಮಲೋದರದ ಕಮನೀಯ ಕಾಂತಿಯನ್ನು ತಾಳಿರಬಹುದು; ಕೋಮಲವಾದ ಅವಳ ಹೃದಯದಲ್ಲಿ ಪ್ರೇಮದ ಬಿರುಗಾಳಿಯು ಹೊಯ್ದಾಡುವಾಗ ಮಂದಮಾರುತನು• ತುಂದಿಲನಾದಂತೆ ಅವಳು

ದೀರ್ಘದೀರ್ಘವಾಗಿ ನಿಶ್ವಸಿರಬಹುದು; ಹೃದಯ-ಜನಿತ-ಮದನ-ಮನೋಹರ-ಸುಮಶರ-ತತಿ-ಹತಿಗಳಿಂದ—

**ವಸಂತ**:— (ಬೆಪ್ಪಾದವನಂತೆ) ಶ್ಯಾಮಾ, ಗಾಬರಿ ಆಗಬೇಡ. ಒಂದು, ಅವಳಿಗೆ ಸಂಸ್ಕೃತ ಬರುವದಿಲ್ಲ; ಇನ್ನೊಂದು, ನನ್ನ ನಾಟಕದಲ್ಲಿಯ ವಾಕ್ಯಗಳನ್ನೆಲ್ಲಾ ನನ್ನ ಮೇಲೆಯೆ ತೂರಬೇಡ. ಅಚ್ಚಕನ್ನಡದಲ್ಲಿ ಒಂದೇ ಒಂದು ಮಾರ್ಮಿಕ ಮಾತು ಹೇಳಿಬಿಟ್ಟೆ, ಎರಡು ಅಂಜಿಕೆ ಹಾಕಿದೆ, ಮೂರು ಆಣೆ ಹಾಕಿದೆ; ಒಪ್ಪಿಕೊಂಡಳು.

**ಶ್ಯಾಮ**:— (ವಿಕಾರಪರವಶನಾದಂತೆ) ಹೇಳು, ಹೇಳು, ಅವಳು ಏನೇನು ಮಾಡಿದಳು ಹೇಳು. ಅವಳು ನಕ್ಕಳು ಹೇಗೆ, ನುಡಿದಳು ಹೇಗೆ—

**ವಸಂತ**:— (ಬೇರಗಾದವನಂತೆ) ಅಲೊ್ಲೋ, ನೀನೇನು ಸಮಾಜ ಸುಧಾರಿಸು ವವನೊ, ನಾಟಕದೊಳಗೆ ಪಾರ್ಟು ಮಾಡುವವನೊ!.... ಅವಳು ನಕ್ಕಿದ್ದರೆ ನಾನೇ ಹೇಳುತ್ತಿದ್ದೆನಲ್ಲ!....ಕೇಳು....ಹಂ....ಹೋದ ವರ್ಷ ಅವಳು ಪಾಢಂಪುರಕ್ಕೆ ಹೋಗಿದ್ದಳು, ಗೊತ್ತದೆ ಏನು ನಿನಗೆ?

**ಶ್ಯಾಮ**:— ಅದೆ....ಪಾಪ!...ಕ್ಷೇತ್ರವೆಂದರೆ ಅವಳಿಗೆ ಪ್ರಾಣ.

**ವಸಂತ**:— ಎಲೊ, ಹುಚ್ಚ ನೀನು! ಗಂಡ ಇದ್ದವರಿಗೆ ಪಂಢರಪುರ ಪುಣ್ಯಕ್ಷೇತ್ರ; ಗಂಡನ್ನ ಕಳೆದುಕೊಂಡವರಿಗೆ ಕುರುಕ್ಷೇತ್ರ.

**ಶ್ಯಾಮ**:—(ತಿಳಿಯದೆ) ಅಂದರೆ?

**ವಸಂತ**:—ಅಂದರೆ– ಕ್ಷೇತ್ರವೆಂದರೆ ಅವಳಿಗೆ ಪ್ರಾಣ-ಹೋಗುವದು.

**ಶ್ಯಾಮ**:—(ಬೇಜಾರವಾಗಿ) ಛೆ.. ನಿನಗೆ ತಿಳಿಯುವದೇ ಇಲ್ಲ..ಅದು ದೇವಸ್ಥಾನ. ಅಲ್ಲಿ ದೇವ ಇದ್ದಾನೆ.

**ವಸಂತ**:—ಅಹುದೊ! ನೂರಾರು ವರ್ಷ ಆಯ್ತು ಟೊಂಕಕ್ಕೆ ಕೈಕಟ್ಟಿ ಕೊಂಡು ಅವನೂ ಹರಿಜನ ಉದ್ಧಾರಕ್ಕೆ ಬದ್ಧ-ಕಂಕಣ ಆಗಿ ನಿಂತು. ಆದರೆ ಅವ majority ದೇವ ಅಲ್ಲ; depressed class ಇಗಾಗಿ special ward ಇನಿಂದ ಆರಿಸಿ ಬಂದವ.

**ಶ್ಯಾಮ**:—(ತಿಳಿಯದೆ) ಅಲ್ರೊ! ಅದಕ್ಕೂ ನನ್ನ ಮದಿವೆಗೂ ಏನು ಸಂಬಂಧ?

**ವಸಂತ**:—(ಗಾಂಭೀರ್ಯ ತಾಳಿ) ಕೇಳುವಂಥವನಾಗು. ಒಂದು, ನಿನ್ನ ಮದಿವೆ ಅವನ ಅಧ್ಯಕ್ಷತೆಯೊಳಗೆಯೆ ಆಗಬೇಕು. ಇನ್ನೊಂದು, ಯಮುನಾನ ವಿಷಯು. "ಯಮುನಾ, ನೀ ಪಂಢರಪುರಕ್ಕೆ ಹೋದುದ್ದು ಎಲ್ಲಾರಿಗೂ ಗೊತ್ತಾಗೇದ" ಅಂದೆ. "ಇಲ್ಲ, ನನ್ನ ತಪ್ಪಿಲ್ಲ" ಅಂದಳು. "ನನಗ ಏನೂ ಗೊತ್ತಿಲ್ಲ" ಅಂದೆ. "ಹಾಗಾದರ ನೀವು ಹೇಳಿದ ಹಾಗ ಮಾಡತೀನಿ" ಅಂದಳು. "ಆಗಲಿ, ಹಾಗಿದ್ದಲ್ಲಿ ಆ ಹುಡುಗನ ತಂದೆಯಾದ ಶ್ಯಾಮನನ್ನು ಮದಿವೆಯಾಗು" ಅಂದೆ. "ಆಗಲಿ" ಅಂದಳು. ಭರತವಾಕ್ಯ. ಪರದೆಯು ನಿಧಾನವಾಗಿ ಬೀಳುವದು.

**ಶ್ಯಾಮ**:—(ಇನ್ನೂ ತಿಳಿಯದೆ) ಅಲ್ರೊ – ಶ್ಯಾಮ ಯಾರು? ಆ ಹುಡುಗ ಯಾರು? ನನ್ನ ಮದಿವೆಯೊಳಗೆ ಅವರದೇನು ಸಂಬಂಧ?

**ವಸಂತ**:—ನಿನ್ನ ಮದಿವೆಗೆ ಇನ್ನೊಬ್ಬ ಶ್ಯಾಮ ಎಲ್ಲಿಂದ ಬರಬೇಕು? ಶ್ಯಾಮ ಅಂದರೆ ನನ್ನ ಗೆಳೆಯನಾದ ನೀ; ಹುಡುಗ ಅಂದರೆ ನಿನ್ನ ಮಗ.

**ಶ್ಯಾಮ**:—(ಸಂಶಯದಿಂದ) ಏನು?

**ವಸಂತ**:—ಹುಡುಗನೇ ಇದ್ದರೆ ನಿನ್ನ ಮಗ; ಹುಡುಗೆ ಆಗಿದ್ದರೆ ನಿನ್ನ ಮಗಳು. ಆದರೂ ಗಂಡಮಗನ್ನ ಹಡೆಯೋದರಲ್ಲಿ ಆನಂದ ಒಂದು–

**ಶ್ಯಾಮ**:—(ಒಮ್ಮೆಲೆ ಹೊಳೆದು) ಅಯ್ಯೊ! ಅವಿವೇಕೀ! ಎಂತಹ ಮಾತುಗಳನ್ನು ಆಡುವಿಯೊ? ಅದರ ಅರ್ಥ ಆದರೂ ತಿಳಿದದೆಯೆ ನಿನಗೆ? ಅಲ್ಲದ-ನಲ್ಲದ ಸುಳ್ಳು ಅಪವಾದಕ್ಕೆ ಅವಳನ್ನೂ ನನ್ನನೂ ಗುರಿಮಾಡುವ ನಿನ್ನ ಮೂರ್ಖತನಕ್ಕೆ—

**ವಸಂತ**:— (ನೊಂದುಕೊಂಡವನಂತೆ) ಶ್ಯಾಮಾ, ತಡೆ. ಅವಳಿಗೆ ನಾ ಹೇಳಿದ್ದೆಲ್ಲ ಸುಳ್ಳು ಎಂದು ನಿನಗೂ ಗೊತ್ತಿದೆ, ನನಗೂ ಗೊತ್ತಿದೆ. ಒಂದೇ

ಮಾತಿನಲ್ಲಿ ಮದಿವೆ ಮಾಡಲು ನಾನೇನು ಬಂಡತುಂಡ ಪುರೋಹಿತ ಜಾತಿಯವ ಎಂದು ತಿಳಿದಿರುವೆಯಾ? ಅವರಂತೆ ಸ್ವಾರ್ಥಕ್ಕಾಗಿ ಸುಳ್ಳು ಸಾಧಿಸುವವ ನಾ ಎಂದು ತಿಳಿದಿರುವೆಯಾ?.......... (ಕನಿಕರದಿಂದ) ಅಲ್ಲೋ, ನಾನು ನಾಟಕಕಾರನೊ ಶ್ಯಾಮಾ! ಒಂದೇ ಮಾತಿನೊಳಗೆ ಮದುವೆ ಆದರೆ ೩-೪ ತಾಸಿನ ನಾಟಕ ಬರೆಯುವದು ಹೇಗೆ? ಅದಕ್ಕೆ ಒಂದೆರಡು ಸುಳ್ಳು ಕೂಡಿಸಿ—

**ಶ್ಯಾಮು:—** (ತಿರಸ್ಕಾರದಿಂದ) ಸುಳ್ಳು! ಸುಳ್ಳು! ಇದು ಬರಿಯ ಸುಳ್ಳಲ್ಲ-ಹೇಸಿ ಅಪವಾದ!

**ವಸಂತ:—** (ನಿರಾಶೆಯ ದನಿಯಲ್ಲಿ) ಛೆ! ನನಗೇನು ಗೊತ್ತು ಇದೆಲ್ಲ? "ಸಮಾಜ ಸುಧಾರಣೆ ಮಾಡುವವ ನಾನು" ಎಂದು ಉತ್ಸಾಹ ದಿಂದ ಹೇಳಿದೆ ನೀನು....ಬರಿಯ ವಿಧವಾವಿವಾಹದಿಂದ ನಿನ್ನ ಉತ್ಸಾಹ ಪೂರ್ತಿ ಆಗಲಿಕ್ಕಿಲ್ಲ ಎಂದು ತಿಳಿದು—ಆ ವಿಧವೆಗೆ ಒಂದು ಕೂಸು ಇರಲಿ ಅಂತ ಹಂಚಿಕೆ ಹಾಕಿದರೆ—

**ಶ್ಯಾಮು:—** (ಅಸಹ್ಯವಾಗಿ) ಹುಚ್ಚು!....ಸಮಾಜಸುಧಾರಣೆ ಅಂದರೆ ಪಾಪದ ಕೆಲಸ ಅಲ್ಲ.

**ವಸಂತ:—** ಪಾಪ ಮಾಡದೆಯೆ ಸಮಾಜ ಸುಧಾರಿಸುವದಿಲ್ಲಾ ಅಂತ ನನ್ನ ಅಭಿಪ್ರಾಯ ಇದ್ದಿತು.... ನೋಡು— ನಡೆದುಬಂದದ್ದೆಲ್ಲಾ ಪುಣ್ಯ ಅಂತ ಹೇಳುವಾಗ, ಹೊಸತೊಂದು ಏನಾದರೊಂದು ನಡೆಸಬೇಕಾ ದರೆ ಪಾಪ ಮಾಡಲೇ ಬೇಕಲ್ಲ?

**ಶ್ಯಾಮು:—** (ಸಿಟ್ಟಿನಿಂದ) ವಸಂತಾ, ನೀನು ಮೂರ್ಖನಿರುವಿ?

**ವಸಂತ:—** ಅಹುದು, ಶ್ಯಾಮಾ, ಇಲ್ಲದಿದ್ದರೆ ಸಮಾಜಸುಧಾರಕರ ಜೊತೆ ಯಲ್ಲಿ ಸೇರಿಕೊಳ್ಳುತಿದ್ದೆನೆ ಹೀಗೆ?

**ಶ್ಯಾಮು:—** (ತಿರಸ್ಕಾರದಿಂದ) ನಿನಗೆ ಜನರ ಸ್ವಭಾವ ಕೂಡ ಗೊತ್ತಿಲ್ಲ.

**ವಸಂತ:—** ನನ್ನ ಒಂದೆರಡು ನಾಟಕಕ್ಕೆ ದುಡ್ಡು ಆಗಿದೆಯೊ, ಶ್ಯಾಮಾ.

**ಶ್ಯಾಮು:—** (ಸಿಟ್ಟುತಡೆಯದೆ) ನೀನು ನೀಚನಿರುವಿ.

**ವಸಂತ:—** ಹಂ—ಅದೇ ಕಾರಣ ಇದ್ದರೂ ಇರಬಹುದು.

**ಶ್ಯಾಮ:—** (ಗಟ್ಟಿಯಾಗಿ)ವಿಧವೆ ಆದ ಮಾತ್ರಕ್ಕೆ ಹೆಂಗಸಿಗೆ ಮಾನ-ಮರ್ಯಾದೆ ಇಲ್ಲವೆ?

**ವಸಂತ:—** ಮರ್ಯಾದೆ ಇದ್ದ ಹೆಂಗಸು ಗಂಡನನ್ನು ಕಳೆದುಕೊಳ್ಳು ತಿದ್ದಳೆ?

**ಶ್ಯಾಮ:—** (ಹಟದಿಂದ) ಅದು ಅವಳ ದೋಷ ಅಲ್ಲ.

**ವಸಂತ:—** (ಜ್ಞಾನಿಯಂತೆ) ಇಂದಿನದಲ್ಲ, ಹಿಂದಿನ ಜನ್ಮದ ಪಾಪ. ಎಲ್ಲ ಒಂದೇ.

**ಶ್ಯಾಮ:—** (ಒಮ್ಮೆಲೆ ಉದ್ವೇಗದಿಂದ) ಅಯ್ಯೋ! ನನ್ನ ಆಯುಷ್ಯ ಹಾಳು ಮಾಡಿದೆ! ನನ್ನ ಕಾರ್ಯ-ವಿಘಾತ ಮಾಡಿದೆ!

**ವಸಂತ:—** ಹಾಂ ಅದು ಮಾತ್ರ ನಿನ್ನ ತಪ್ಪುಕಲ್ಪನೆ ನೋಡು. ಕೊನೆಗೆ ನಿನ್ನ ಕೂಡ ಮದಿವೆ ಆಗಲು ಒಪ್ಪಿಕೊಂಡಾಳೆ!

**ಶ್ಯಾಮ:—** (ತಿರಸ್ಕಾರದಿಂದ) ಹೀಗೆ ವಂಚಿಸಿ, ಹೆದರಿಸಿ ಮದಿವೆ ಆಗುವದರಲ್ಲಿ ಯಾವ ಲಾಭವಿದೆ?

**ವಸಂತ:—** (ಹೆದರಿದವನಂತೆ) ಇದೇನೊ! ನಾಳೆ ನೀವಿಬ್ಬರೂ ಕೂಡಿಯೆ ಹೋಗುವಿರಿ ಎಂದು ಉಂಡಿ, ಫಲಾಹಾರ ದಾರಿಗೆ ಹೆಚ್ಚಾಗಿ ಕಟ್ಟಿ ಕೊಳ್ಳಲು ಹೇಳಿರುವೆನಲ್ಲೊ!

**ಶ್ಯಾಮ:—** (ಸಂಶಯದಿಂದ) ಇಬ್ಬರೂ ಕೂಡಿ?

**ವಸಂತ:—** ಅಹುದು....ಶ್ಯಾಮಾ, ಸುಮ್ಮಸುಮ್ಮನೆ ನನ್ನಮೇಲೆ ಸಿಟ್ಟಾಗಿರುವೆ. ನೀವಿಬ್ಬರೂ ಕೂಡಿಯೆ ನಾಳೆಯೆ ಹೊರಡಬೇಕು; ವಿಲಂಬವಾದರೆ ಸುಖವಿಲ್ಲ. ೩–೪ ದಿವಸಗಳಲ್ಲಿ ಆಷಾಢ ಏಕಾದಶಿಯ ಗಲಾಟೆ ಸುರು ಆಗುವದು ಪಂಢರಪುರದಲ್ಲಿ. ಆಗ ಕಾಲರಾದ ಹೆದರಿಕೆ. ಅದಕ್ಕೆ ಅಷ್ಟರೊಳಗೆಯೆ ನೀವಿಬ್ಬರೂ ಮದಿವೆ ಮಾಡಿಕೊಂಡು ತಿರುಗಿ ಬರಬೇಕೂ ಅಂತ—

**ಶ್ಯಾಮ:—** (ಅರ್ಧವಿಚಾರದಲ್ಲಿಯೆ) ಛೆ!....ಆದರೆ....ಈ ಅಪವಾದದ ಕಲಂಕ ಹತ್ತುವದಲ್ಲ!

**ವಸಂತ:—** (ಸಮಾಧಾನದಿಂದ) ನಾನೂ ಬಹಳ ವಿಚಾರ ಮಾಡಿದೆ, ಶ್ಯಾಮಾ. ಲೋಕಾಪವಾದ ಬಂದರೆ ದೊಡ್ಡಿಸ್ತನ ಬರಬಹುದೇನೊ ಅಂತ.... ಇದಲ್ಲದೆ ಮದಿವೆಯ ಹೆಂಡತಿಯಮೇಲೆ ಅಪವಾದ ಬಂದರೆ ಅವಳನ್ನು ಬಿಟ್ಟುಬಿಡಬಹುದಾಗಿತ್ತು; ಮೊದಲನೆಯ ಮಾವನಿಂದ ಹೆಚ್ಚು ದುಡ್ಡು ಆಗಲಿ, ಎರಡನೆಯ ಮಾವನನ್ನಾಗಲಿ ಗಂಟುಹಾಕಿಕೊಳ್ಳಲಿಕ್ಕೆ ಬರುವದು; ಇದಲ್ಲದೆ ಲೌಕಿಕ ಆದರೂ ಬೆಳೆಯುವ ಆಸೆ... ಇನ್ನು ಮದಿವೆಯ ಮುಂಚಿತ ಅಪವಾದ ಇದ್ದ ಹುಡುಗಿಯನ್ನು ಬಿಡುವದರೊಳಗೆ ಯಾವ ಲಾಭ? (ಶ್ಯಾಮನು ವಿಚಾರಮಗ್ನನಾಗುವನು) ಇದಲ್ಲದೆ ನಾಳೆ ಹರಿಜನರ ಉದ್ಧಾರಕ್ಕೆ ಟೊಂಕ ಕಟ್ಟಬೇಕಾದರೆ ಮೊದಲು ಏನಾದರೊಂದು ಲೋಕಾಪವಾದ ಬೇಕೊ ಬೇಡವೊ ಮೈಮೇಲೆ? ಯಾರಿಗೆ ನೋಕರಿ ಸಿಕ್ಕಿರುವದಿಲ್ಲ ಅಂತ, ಯಾರಿಗೆ ಹೆಚ್ಚಿನ ದುಡ್ಡು–ದೊಡ್ಡಿಸ್ತನ ಬೇಕಾಗಿದೆ ಅಂತ, ಯಾರಿಗೆ ವರ ಸಿಕ್ಕಿರುವದಿಲ್ಲ ಅಂತ, ಯಾರಿಗೆ ಮುನಿಸಿಪಾಲ್ಟಿಗಾಗಿ voteಉ ಬೇಕೂ ಅಂತ—ಹೀಗೆ ಏನಾದರೊಂದು ಲೋಕಾಪವಾದ ಇದ್ದರೆಯೆ ಲೋಕಸಂಗ್ರಹದ ಕೆಲಸ ಒಳ್ಳೆ ಹುರುಪಿನಿಂದ ಮಾಡಲಿಕ್ಕೆ ಬರೋದಲ್ಲವೆ? ....ಅದಕ್ಕೆ ಮೊದಲು ನಾವಾಗಿಯೆ ಡಿಗ್ರೀ ಅಂತಹಾದೊಂದು ಜೊಳ್ಳ ಲೋಕಾಪವಾದ ತೂಗಿಹಾಕಿಕೊಂಡು ಬಿಟ್ಟರಾಯಿತಲ್ಲ? ನಮ್ಮ ಪೂಜಾರಿ ಪುಂಡಲೀಕಭಟ್ಟ ಹೇಳೋದಿಲ್ಲವೆ— **प्रथमग्रासे मक्षिकापातः** —ಮೊದಲನೆಯ ಹೆಜ್ಜೆಗೆಯೆ ಮೊಚ್ಚೆಯ ಪೆಟ್ಟು ಅಂತ!....ಆಂ.... ಏನು....?

**ಶ್ಯಾಮ:—** (ಉಸಿರೆಳೆದು ಕಸಿಕರದ ನಗೆಯಿಂದ) ಏನೊ! ನಿನ್ನ ಮಾತಿನ ಅರ್ಥ ನಿನಗೆಯೆ ಗೊತ್ತು!....(ವಿಚಾರಿಸಿ) ಆದರೂ....ಇದರಲ್ಲಿ ಏನೊ ಸಾಹಸ ಇದೆ....ಆಗಲಿ....ಆದರೂ, ಈ ಲೋಕಾಪವಾದ ಸುಳ್ಳೆಂಬುದು ಚರಾಚರಸೃಷ್ಟಿಯ ಕರ್ಮಸಾಕ್ಷಿಯಾದ ಆ ಸೂರ್ಯದೇವನಿಗೆಯೆ ಗೊತ್ತು.

**ವಸಂತ:—** ಎಲೊ!........ ಹುಚ್ಚು ಹುರುಪಿನೊಳಗೆ ದೇವರದಾಗಲಿ,

ಬ್ರಾಹ್ಮಣರದಾಗಲಿ ಸಾಕ್ಷ್ಯ ಕೊಟ್ಟಗಿಟ್ಟೀ !....ಹಂ.... ಅದೇನೇ ಇರಲಿ, ನೀನು ಹೊರಡುವ ಸಿದ್ಧತೆಯಲ್ಲಿರು—ಯಾರಿಗೂ ತಿಳಿಯದ ಹಾಗೆ ಸಾಮಾನು ಕಟ್ಟಿಕೋ....ಬಟ್ಟೆ-ತಟ್ಟೆ ಸರಿಯಾಗಿ—

**ಶ್ಯಾಮ:—** (ತಿರಸ್ಕಾರದ ನಗೆಯಿಂದ) ಮುಂದಿಯ ವಿಷ್ಯಾಟಸ್ನಕ್ಕಾಗಿ ಹೊಂದಿದ ಹಾರುವರ ಮದಿವೆ ಅಲ್ಲ ಇದು ಸಿಂಗರಿಸಿಕೊಂಡು ಸವಿ-ಸವಿ ಊಟ ಉಣ್ಣಲಿಕ್ಕೆ.

**ವಸಂತ:—** (ತಿಳುಹಿಸುವವನಂತೆ) ನಾ ಹೇಳಿದ ಬಟ್ಟೆ-ತಟ್ಟೆ ಮದಿವೆಗಾಗಿ ಅಲ್ಲೊ! ಮದಿವೆ ಆದಮೇಲೆ ಬೇಕಾಗುವದು. ಯಾರಿಗೆ ಗೊತ್ತು—ಎಂತಹ ವೇಳೆ ಬರುವದೆಂಬುದು?....೪-೬ ಶರ್ಟು, ೨-೩ ಜೋಡ ದೋತರ, ಒಂದೆರಡು ಡಝನ್ ರೇಝರ ಬ್ಲೇಡ್ಸು— (ಶ್ಯಾಮನು ಬೊಳ್ಳೆಂದು ನಗಲು) ನಗಬೇಡೊ! ನಾಳೆ ಒಂದು ವೇಳೆ ನಿನ್ನ ಮದಿವೆಗಾಗಿ ನಿನ್ನ ತಂದೆ ನಿನ್ನ ಮೇಲೆ ಸಿಟ್ಟಾಗಿ ಒಂದು ಕಾಸು ಕೂಡ ಕೊಡಲಿಲ್ಲ ಎಂದರೆ? ಜಡೆಬಿಟ್ಟು ತಿರುಗುವೆಯಾ? ಹರಕು ಬಟ್ಟೆ ತೊಡುವೆಯಾ?

**ಶ್ಯಾಮ:—** (ನಗೆ ತಡೆಯುತ್ತ) ತಂದೆಯವರು ನನ್ನಮೇಲೆ ಸಿಟ್ಟಾಗುವರಂತೆ! ....(ಕಳಕಳಿಯಿಂದ) ಏನೊ....ಪಾಪ—!....ನನ್ನ ತಾಯಿಗೆ ಮಾತ್ರ ಕೆಲವು ದಿವಸ ಖೇದ ಅನ್ನಿಸಬಹುದು....

**ವಸಂತ:—** ಆ ಹೆದರಿಕೆ ಬೇಡ ನಿನಗೆ. ಹಿಂದು law ದೊಳಗ ಹೆಂಗಸಿಗೆ ಹೊಲ-ಮನೆ, ಹಕ್ಕು-ವಾರಸದಾರಿಕೆ ಯಾವದೂ ಇಲ್ಲ.

**ಶ್ಯಾಮ:—** (ಆವನನ್ನು ದಿಟ್ಟಿಸಿ) ಎಂತಹ ಕಟುಕನಿರುವೆಯೋ ನೀನು!

**ವಸಂತ:—** (ವ್ಯಂಗ್ಯದ ದನಿಯಲ್ಲಿ) ಇಲ್ಲದಿದ್ದರೆ ಜನರ ಸ್ವಭಾವ ತಿಳಿದುಕೊಳ್ಳುವದು ಹೇಗೆ?

**ಶ್ಯಾಮ:—** ಹಂ....ಜನರ ಸ್ವಭಾವ ತಿಳಿಯುವದಂತೆ ಇವನಿಗೆ! ಯಮುನಾಗೆ ಪ್ರಣಯಸಂದೇಶ ಹೇಗೆ ಮುಟ್ಟಿಸಬೇಕು ತಿಳಿಯಲಿಲ್ಲ ಇವನಿಗೆ!....ಹುಂ....ಆದಿರಲಿ.... (ಗಂಭೀರವಾಗಿ) ನಾನು ಹೋದುದಕ್ಕೆ

ಜನರು ನಿನಗೆ ಆಡಿಕೊಳ್ಳಬಹುದು—ಹೆದರಬೇಡ........ನಮ್ಮಂತಹ ಕೆಲಸಕ್ಕೆ ಹೆದರಿಕೆ ಎಳ್ಳಷ್ಟೂ ಉಪಯೋಗದ್ದಲ್ಲ....ಬಹಳೇ ತಡ ಎಂದರೆ–ಒಂದು ವಾರ ತಡವಾಗಬಹುದು ನನಗೆ ತಿರುಗಿ ಬರಲಿಕ್ಕೆ.... ಎಷ್ಟೇ ತಡವಾದರೂ ಮುಂದಿನ ರವಿವಾರದೊಳಗೆ ಬಂದೇ ಬರುವೆ.... ಆ ದಿನ "ಹರಿಜನವಾರ" ಎಂದು ಪಾಲಿಸಬೇಕು ಅಂತ ತಂದೆಯವರ ಆದೇಶ. (ಉತ್ಸಾಹವೇರುತ್ತ) ಆ ದಿನದ ಮೆರವಣಿಗೆಯಲ್ಲಿ ನಾನು, ನೀನು, ಯಮುನಾ ಮುಂದಿನ ಸಾಲಿನಲ್ಲಿ. "ಧೈರ್ಯದಿಂದ ವಿಧವಾ–ವಿವಾಹವನ್ನು ಮಾಡಿಕೊಂಡು ಈಗ ಹರಿಜನಸೇವೆಯನ್ನು ಕೈಕೊಂಡ" ಎಂದು ನನ್ನನ್ನು ನೋಡಿ ಎಷ್ಟೋ ಜನರಿಗೆ ಉತ್ಸಾಹ ದಿಂದ ಕೆಲಸ ಮಾಡಲು ಧೈರ್ಯ ಬರುವದು. ಮುನಿಸಿಪಾಲ್ಟಿಯ ಪ್ರೆಸಿಡೆಂಟ ಎಂಬ ಅಧಿಕಾರದಿಂದ ನನ್ನ ತಂದೆಯವರು, ಸಮಾಜ ಸುಧಾರಕರ ಮುಂದಾಳು ಎಂದು ನಾನು, ಸಾಮಾಜಿಕ ನಾಟಕ ಕಾರ ಎಂದು ನೀನು—ಮುವ್ವರೂ ಕೂಡಿಯೆ ಕೈಕೊಂಡ ಕೆಲಸಕ್ಕೆ, ಮೂರಕ್ಕೆ ಮುಕ್ತಿ, ಎಂಬಂತೆ ಯಶಸ್ಸು ಕಟ್ಟಿಟ್ಟಂತೆಯೆ. ನಮ್ಮೆಲ್ಲರ ಧೈರ್ಯದ ತೇಜಃಪ್ರಕಾಶದಲ್ಲಿ, ನಮ್ಮೆಲ್ಲರ ಉತ್ಸಾಹದ ದೀಪೋ ತ್ಸವದ ಬೆಳಕಿನಲ್ಲಿ—

ಒಳಗೆ ವೇಣಕ್ಕನ ದನಿ: "ಈ ನಡು–ಮನೆಯೊಳಗಿನ ದೀಪ ಯಾಕೆ ಉರಿಸತೀರಿ ಸುಮ್ಮಸುಮ್ಮನೆ?"

**ವಸಂತ:**— ಅಯ್ಯೊ! ವೇಣಕ್ಕ ಬಂದರು–ಸಿಟ್ಟಿಗೆ–ಅಂತ ಕಾಣಿಸತದೊ!.... (ಮೆಲುದನಿಯಲ್ಲಿ) ಈ talkie programme ಈ ಹೊತ್ತು ಇಲ್ಲಿಗೆಯೆ ಮುಗಿಸೋಣ....ಇದು ನೋಡು....ನಾಳಿನ ಕೆಲಸ ಮಾತ್ರ ಮರೆಯ ಬೇಡ.

**ವೇಣಕ್ಕ:**— (ಒಳಗಿನಿಂದಲೆ) ಇಲ್ಲಿ ಯಾರು ಹಚ್ಚಿಟ್ಟಾರ್ರೆ ಈ ದೀಪ?

**ಶ್ಯಾಮು:**— ನಾನೇ—ನಾನೇ ಇಟ್ಟಿದ್ದೆ....ಮರೆತೆ....ಬಂದೆ—

(ವೇಣಕ್ಕನು ಬರುವಳು)

**ವೇಣಕ್ಕ:**— ಅಲ್ಲೊ, ನಿನಗಾದರೂ ತಿಳೀಬಾರದ? (ವಸಂತನನ್ನು ನೋಡಿ)

ಸಣ್ಣವ ಇದ್ದಾಗಿನಿಂದ ಬಹಾಳ ಪುಕ್ಕ, ಖೋಡಿ ನಮ್ಮ ಶ್ಯಾಮು.... ಈಗ ಕೂಡಾ ದೀಪ ಇಡದೆಯೆ ನಿದ್ದೀನೇ ಹತ್ತೋದಿಲ್ಲ ಅವನಿಗೆ. ಹುಡುಗರ ಮಾತು ಬ್ಯಾರೇ, ಏನಾದರೂ, ಯಾಕೊ ವಸಂತಾ? ಆದರ ಅವರೂ ಹಾಗೆಯೆ. ವರ್ಷಾನುವರ್ಷ ಮುನಿಸಿಪಾಲ್ಟಿಯೊಳ ಗಿದ್ದರೂ ಮನೆಯೊಳಗ ಹ್ಯಾಗ ದೀಪ ಉರಿಸಬೇಕು ಗೊತ್ತಿಲ್ಲ ಅವರಿಗೆ....ಮನೀ ಮಾಡಿಕೊಂಡು ಇರೋದೇ ಗೊತ್ತಿಲ್ಲ ಅನ್ನು ಅವರಿಗೆ....ನೋಡಬಾರದ? ಎಲ್ಲಿ ಹೋಗಿಬಿಟ್ಟರೊ ಏನೊ....ಮ್ಯಾಲೆ ವೈಭವ ಬ್ಯಾರೇ ಇವರದು!........ತಾವು ಬರುವತನಕ ಎಲ್ಲಾರೂ ಎಚ್ಚರಿರಬೇಕೂಂತ ಹೇಳಿ ಹೋಗಿಯಾರೆ!

**ವಸಂತ:**— ಅಹುದು, ವೇಣಕ್ಕಾ, ಏನೊ— "ಆಪ್ತಾಲೋಚನ ಮಾಡೋದು, ವಸಂತಾ, ನೀನೂ ಇಲ್ಲಿಯೆ ಇರಬೇಕೂ"ಂತ ನನಗೂ ಹೇಳಿದರು.

**ವೇಣಕ್ಕ:**— ಅಯ್ಯ! ಆಪ್ತಾಲೋಚನೆ! ಮತ್ತೇನಾದರೂ ಇಲೆಕ್ಶನದ ಕೆಲಸ ಇದ್ದಿರಬೇಕು........ ತಮ್ಮದೇನಾದರೂ ಕೆಲಸ ಮಾಡಿಸಿ ಕೊಳ್ಳೋದು ಇತ್ತೂ ಅಂದರ ಆಯ್ತು—ಅವರಿಗೆ ಮನೆ ಹೆಂಡಿರ-ಮಕ್ಕಳ ಮ್ಯಾಲೆ ಪ್ರೇಮ ಬಂತೆ, ಎಲ್ಲಿರತದೊ ಏನೊ! ಶ್ಯಾಮುನು ಆರ-ತಿಂಗಳಿದ್ದಾಗೊಮ್ಮೆ ಹೀಗೆಯೆ ಏನೊ ಮಾಡಿದ್ದರು....ನನಗ ಅದೆಂದಿಗೂ ಮರೆಯೋದಿಲ್ಲ....ಪಾಪ! ಆ ಯಮುನಾಗ ಬ್ಯಾರೇ ಮನೀಗೆ ಹೋಗಬ್ಯಾಡ ಅಂತ ಹೇಳಿಯಾರೆ—ಯಾವಾಗ ಬರತಾರೊ ಏನೊ! ತಮ್ಮ ಮನೆಯ ಆಪ್ತಾಲೋಚನಾಕ್ಕ ಆ ಹುಡುಗೆ ಯಾಕೆ ನಿದ್ದೆ ಕಟ್ಟಬೇಕೊ!

**ಶ್ಯಾಮು:**— (ಅಧೈರ್ಯದಿಂದ ವಸಂತನಿಗೆ) ಏನೊ—ಆಪ್ತಾಲೋಚನೆ?

**ವಸಂತ:**— ಇದುವರೆಗೆ ಹೇಳಿದೆನಲ್ಲೊ—ಅದೇ........ಇಷ್ಟರಲ್ಲಿಯೆ ಬರ ಬಹುದು, ವೇಣಕ್ಕಾ....ಇಲ್ಲಿಯೆ ಯಾವದೋ ಒಂದು ಚಹಾ-ಪಾರ್ಟಿಗೆ ಹೋಗಿಯಾರೆ.

**ಸೀತಕ್ಕ:**—(ಒಮ್ಮೆಲೆ) ಅಯ್ಯೊ! ತಿಳೀತು ಇವರ ಆಟ....ಮತ್ತೆ ಇನ್ನು ಮಂದೀನ್ನ ಕರೆಸುಕೊಂಡು ಬಂದು ಅವರಿಗೆಲ್ಲಾ ಚಹಾ ಆಗ ಬೇಕೇನೊ? ಅದಕ್ಕೆಯೆ ಹೇಳಿದರು, ತಾಯಿಾ, ಆಪ್ತಾಲೋಚನೆ ಅಂತ! ಚಹಾ ಅಂತ ಹೇಳಿದ್ದರ ಸಿಕ್ಕತಿದ್ದಿಲ್ಲ ಅಂತ ಈಗ ಆದರೂ ಖಾತ್ರಿ ಆಯಿತೇನೊ ಅವರಿಗೆ!....ಹಂ....ಮನೆಯ ಹೆಂಡಿರ ಜೋಡಿ ಆದರೂ ಸರಳ ನಡೆಯಬಾರದೆ?...(ಒಳಗೆ ಸದ್ದು ಕೇಳಿ) ಬಂದರೇನೊ.... (ಬಾಗಿಲಿಗೆ ಬಂದು) ಅಯ್ಯೊ! ಈ ಬ್ರಾಹ್ಮಣ ಬಂದನ? ಅಂದರ ಆಪ್ತಾಲೋಚನೆ ಮಾಡೋದು ಅಷ್ಟರೊಳಗೆಯೆ ಅದ....ಇಲೆಕ್ಶನದ ಸುದ್ದಿ, ಇಲ್ಲಾ ಮಂದಿಯ ಮನೆಯ ಸುದ್ದಿ.... (ಒಳಗೆ ಹೊರಟು ತಿರುಗಿ ನಿಂತು) ಶ್ಯಾಮಾ, ಈ ಒಳಗಿನ ಕೋಣೆಯ ಕಂದೀಲು ಸಣ್ಣ ಮಾಡಿ ಗೂಟಕ್ಕ ತೂಗಹಾಕಿ ಬಿಡೊ. (ಹೋಗುವಳು. ''ಹುಂ'' ಎಂದು ಶ್ಯಾಮನೂ ಅವಳ ಹಿಂದಿನಿಂದಲೆ ಹೋಗುವನು).

ವಸಂತನು ಅವರಿಬ್ಬರೂ ಹೋದುದನ್ನು ನೋಡುತ್ತ ತನ್ನಷ್ಟಕ್ಕೆ ತಾನು ಮುಗುಳ್ನಗೆ ನಕ್ಕು ಉಸುರ್ಗರೆಯುವನು. ಒಳಕ್ಕೆ ಹೋಗಬೇಕೆಂದು ಹೊರಟು ಬಾಗಿಲವರೆಗೆ ಹೋಗಿ ಒಮ್ಮೆಲೆ ತಿರುಗಿ ಬಂದು ಎದದ ಗೋಡೆಯ ತೆಕ್ಕೆಯೊಂದಕ್ಕೆ ಆತು ಕುಳಿತು ಕೊಳ್ಳುವನು. ಇಷ್ಟರಲ್ಲಿ ಅಂತಪ್ಪನೂ ತಾತ್ಯಾಚಾರಿಯೂ ಬರುವರು. ಕೂಡಲೆ ವಸಂತನು ವೀಳ್ಯದ ತಾಟನ್ನು ತನ್ನ ಹತ್ತಿರ ಎತ್ತಿಟ್ಟುಕೊಂಡು ವಿಚಾರ ಮಾಡುವವನಂತೆ ವೀಳ್ಯವನ್ನು ತಿನ್ನುತ್ತ ಧ್ಯಾನಮಗ್ನನಾಗುವನು.

**ತಾತ್ಯಾಚಾರಿ:**—(ಅವನನ್ನು ನೋಡಿ, ಅಸಹ್ಯದಿಂದ) ಅಂತಪ್ಪ, ಆ ನಾರಾಯಣಾಚಾರಿಯ ಆಕಳ ನೋಡಿರುವೆಯೇನೊ?

**ಅಂತಪ್ಪ:**— (ಏನೂ ತಿಳಿಯದೆ) ಇಲ್ಲ–ಯಾಕೆ–ಮತ್ತೇನಾಗೇದ ಅದಕ್ಕ?

**ತಾತ್ಯಾಚಾರಿ:**— ಅದಕೇನು ದಾಡಿ? ಯಾವಾಗಲೂ ಮಂದಿಯ ಗದ್ದೆಯೊಳಗೆಯೆ ಮೆಯ್ಯುವದು.

**ವಸಂತ:**— ಅಜ್ಜ, ಕಾಕಪಿಂಡ ಅಂದರೆ ಏನು ಗೊತ್ತಿದೆಯೆ ನಿನಗೆ?

**ಅಂತಪ್ಪ:**— (ಬೆಪ್ಪನಂತೆ ತಿರುಗಿ ನಿಂತು) ಏನು?

**ವಸಂತ:—** ಮುಂದಿಯ ಅನ್ನ ತಿಂದು ಅವರ ಮನಸಿನೊಳಗ ಇಲ್ಲದ್ದನ್ನು ತೋರಿಸಿ ಕೊಡುವದು.

**ಅಂತಪ್ಪ:—** (ಬೆರಗಾದವನಂತೆ ಇಬ್ಬರನ್ನೂ ನೋಡುತ್ತ) ಏನೊ ಇದು! ಏನು ಮಾತಾಡುವಿರೊ? (ಒಮ್ಮೆಲೆ ಹೊಳೆದು, ನಕ್ಕು) ಓಹೊ! ಮಾವ ಅಳಿಯ ಒಬ್ಬರೊಬ್ಬರಿಗೆ ನಮಸ್ಕಾರ ಮಾಡುವ ಪದ್ಧತಿ ಏನು ಇದು?

**ತಾತ್ಯಾಚಾರಿ:—** (ಸಿಟ್ಟಿನಿಂದ) ಅಂತಪ್ಪ, ನನ್ನ ಪಾಲಿನ ಅಳಿಯ ಎಂದೊ ಸತ್ತು ಹೋದ ಅಂತ ಹೇಳಲ್ಲೆ ನಿನಗ? ನನ್ನ ಮಗಳು ವಿಧವಾ ಎಂಬೋ ಕೆಟ್ಟ ಮಾತು ಹೇಳಿಕೊಂಡರೂ ಚಿಂತೆ ಇಲ್ಲ-ಆದರೆ ಧರ್ಮ ಲಂಡರ ಸಹವಾಸ ಬೇಡ ಆವಳಿಗೆ.

**ವಸಂತ:—** ಹಿರಿಯರು ತೋರಿಸಿದ್ದು ಹುಡುಗರ ಹಾದಿ, ಅಲ್ಲೇನು ಅಜ್ಜ? ತಂದೆಯ ಹಾಗೆ ತಾನೂ ನಡೆಯಬೇಕು ಅಂತ ಆ ಹುಡುಗೆ ನನ್ನಂತಹ ಧರ್ಮಲಂಡನ ಬೆನ್ನು ಕಟ್ಟಿರಬಾರದು ಯಾಕೆ, ಅಜ್ಜ.

**ತಾತ್ಯಾಚಾರಿ:—** (ದ್ವೇಷದಿಂದ) ಬಾಯಿ ಮುಚ್ಚೊ! ನಿನ್ನ ಮಾತಾಡಿಸಲಿಕ್ಕೆ ಹಾತೊರೆದು ಇಲ್ಲಿಗೆ ಬಂದಿಲ್ಲ ನಾ—ಹಂ....

**ವಸಂತ:—** (ನಿರಾಶೆಯ ನೋಗಿನಿಂದ) ಧರ್ಮಲಂಡರ ಸಹವಾಸ ಬೇಕಾದವರು ನನ್ನ ಕಡೆ ಯಾಕೆ ಬಂದಾರು?

**ತಾತ್ಯಾಚಾರಿ:—** (ಸಿಟ್ಟು ತಡೆಯುತ್ತ) ಕೇಳು ಕೇಳು, ಅಂತಪ್ಪ. ಅವನ ನಾಲಿಗೆಗೆ ಏನಾದರೂ ತಾಳ—ಮೇಳ ಆದ ಏನು ಕೇಳು! ಯಾರಿಗೆ ಅವ ಧರ್ಮಲಂಡ ಅಂತಾನೆ ಕೇಳು! ಇನ್ನೂ ನಾ ತನ್ನ ಮಾವ ಅಂತ ತಿಳಿದುಕೊಂಡಾನೊ ಏನು, ಕೆದರಿ ಜಗಳ ತೂಡಲಿಕ್ಕೆ?

**ವಸಂತ:—** ಅಜ್ಜ, ಮೊದಲು ನನ್ನ ಮಾತು-ಕೇಳಿಕೊ; ಸತಿಗೆ ಸೌಭಾಗ್ಯ ಅಂದರೆ ಪತಿಯೆ ಅಲ್ಲವೆ—ಅಂದರೆ ಆವಳ ಪತಿಯೆ ಅಲ್ಲವೆ? ಜಗತೀ ತಲಕ್ಕೆ ಲಲಾಮಭೂತರಾದ ಆರ್ಯಲಲನೆಯರಿಗೆ ಪಾತಿವ್ರತ್ಯವೇ ಧರ್ಮ ಅಲ್ಲವೇ? ಪಾತಿವ್ರತ್ಯದ practice ಮಾಡಬೇಕಾದರೆ ಗಂಡನ

ಸಹವಾಸದಲ್ಲಿಯೆ ಇರಬೇಕಲ್ಲವೆ ? ಪಾತಿವ್ರತ್ಯದ degree ದೊರಕಿಸಬೇಕಾದರೆ ಗಂಡನ ಮನೆಯೊಳಗೆ term ತುಂಬಬೇಕಲ್ಲವೆ ? ....ಇನ್ನಿಷ್ಟು ಕೇಳು, ಅಜ್ಜ, ಸ್ವಲ್ಪ ತಡೆ....ಪಾತಿವ್ರತ್ಯಕ್ಕೆ ಭಂಗ ಉಂಟುಮಾಡುವವರು ರಾಕ್ಷಸರೆ ಅಲ್ಲವೆ ? ಸೀತಾನ್ನ ರಾಮನಿಂದ ಒಡಿಸಿದ ರಾವಣನಿಗೂ, ಮಗಳನ್ನ ಅಳಿಯನಿಂದ ಬಿಡಿಸಿದ ಮಾವ ನಿಗೂ ಅಂತರ ಏನು, ಅಜ್ಜ ? (ವಿಷಾದದ ಸೋಗಿನಿಂದ) ಆಯ್ತು, ಶ್ರೀರಾಮನಂತವಗ ಕೂಡಾ ಹೆಂಡತಿಯಿಂದ ವಿಯೋಗ ಆಯ್ತು ಎಂಬೋದೊಂದೇ ಸಮಾಧಾನದಿಂದ ಕಾಲ ಕಳೀತೀನಿ ಆಯ್ತು.

**ತಾತ್ಯಾಚಾರಿ:—** (ಅತ್ಯಂತ ತಿರಸ್ಕಾರದಿಂದ) ಹಂ.... ಶ್ರೀರಾಮನಂತೆ........ ರಾಮ, ರಾಮ....ಹೊಲೆಯಮುಂಡೇಗಂಡರ ಜೋಡಿ ನಾಟಕಾ ಮಾಡತಿದ್ದಿಲ್ಲ ಶ್ರೀರಾಮ !

**ವಸಂತ:—** ಪಾಪ ! ಆಗ ನಾಟಕ ಅಂದರೇನು ಗೊತ್ತಿರಲಿಲ್ಲ. ಇಲ್ಲಾ ಅಂದರ ಶಬರಿಯ ಎಂಜಲ ತಿಂದ ಶ್ರೀರಾಮ ಹೊಲೆಯಮುಂಡೇ ಗಂಡರ ಜೋಡಿ ನಾಟಕಾ ಮಾಡದೇ ಬಿಡತಿದ್ದನ ? ಉತ್ತಮ ಕಂಪನಿ ತೆಗೀತಿದ್ದ! ಈಗ ಮಂಗನ **ಅಂತಹ** actor ಸಿಕ್ಕಿದರ- ಅವನಿಗೆ ಸಾಕ್ಷಾತ್ ಮಂಗಗಳೇ ಇರುತ್ತಿದ್ದುವು ಕಂಪನಿಯೊಳಗ ?

**ಅಂತಪ್ಪ:—** (ದೊಡ್ಡಿಸ್ತನದ ದನಿಯಲ್ಲಿ) ಯಾಕೆ ಸಂಬಂಧ-ಸೂರಿ ಇಲ್ಲದ ಮಾತಾಡತೀಯೊ, ವಸಂತಾ ?

**ವಸಂತ:—** (ಸಿಟ್ಟಿನ ಸೋಗಿನಿಂದ) ಅಲ್ಲ-ಸಾಕ್ಷಾತ್ ಪರಮಾತ್ಮನ ಅವತಾರ ನಾದ ಶ್ರೀರಾಮದೇವರಿಗೆ ನಾಟಕಕಂಪನಿಯ ಮೂಲಕ ಆಗುವ ಯೋಗ್ಯತಾ ಇಲ್ಲ ಅಂದರೆ ?

**ಅಂತಪ್ಪ:—** (ಮೊದಲಿನಂತೆಯೆ) ಅಲ್ರೊ, ಹೊಲೆಯರ ಜೋಡಿ ಕೆಲಸ ಮಾಡೋದು ಕೆಟ್ಟ ಅಂತ ಹೇಳಲಿಲ್ಲ ನಿಮ್ಮ ಮಾವ-

**ತಾತ್ಯಾಚಾರಿ:—** (ಸಿಟ್ಟಿನಿಂದ) ಆ ನೀಚನ ಮಾವ ನಾ ಅಲ್ಲ ಅಂತ ಎಷ್ಟು ಸಲ ಹೇಳೀನಿ-

**ಅಂತಪ್ಪ:—** ತಡೆಯೊ, ತಾತ್ಯಾಚಾರಿ; ಋಣಾನುಬಂಧ ಯಾರ ಕಯ್ಯೊಳಗಿನ ಮಾತು?....ವಸಂತಾ, ಈಗ ನೋಡು, ನಮ್ಮ ದೊಡ್ಡರಾಯರು ಮಾಡುವ ಕೆಲಸ, ಸಾಕ್ಷಾತ್ ದೇವಕಾರ್ಯ..ಭಕ್ತರನ್ನು ಪತಿತರನ್ನು ಉದ್ಧಾರ ಮಾಡೋದು.

**ವಸಂತ:—** ಆಗಲಿ, ಹಾಗಾದರ ಆತ ನನ್ನ ಮಾವ ಅಂತ ಒಪ್ಪಿಕೋತೀನಿ.

**ಅಂತಪ್ಪ:—** ತಡೆ, ತಾತ್ಯಾಚಾರೀ;....ದೇವರು-ದೇವರು ಮೇಲಿನಾತನೆ; ಆದರೂ ಕೆಳಗಿನ ಭಕ್ತರನ್ನ ಎತ್ತಿ ಉದ್ಧಾರಮಾಡಬೇಕೂಂತ—

**ತಾತ್ಯಾಚಾರಿ:—** (ಭಕ್ತಿಯಿಂದ) ಅದು ಶ್ರೀಮದಾನಂದತೀರ್ಥ ಪೂರ್ಣಪ್ರಜ್ಞರು ಹೇಳುವದು....ಹುಂ! ಅವನಿಗೇನು ಹೇಳುನೆ ಅಂತಹ ಗಹನ ವಿಷಯ!

**ವಸಂತ:—** ಅಜ್ಜ, ದೊಡ್ಡರಾಯರ ಮಾಡೋದನ್ನ ಮಾಡಬೇಕೂಂತ ನನ್ನ ಇಚ್ಛಾ. ಆದರೂ ಧೈರ್ಯ ಬೇಕಲ್ಲ, practice ಬೇಕಲ್ಲ?

**ತಾತ್ಯಾಚಾರಿ:—** (ತಿರಸ್ಕಾರದಿಂದ) ನಾಯಿಯ ಬಾಲ!

**ವಸಂತ:—** (ಅವನ ಕಡೆಗೆ ಲಕ್ಷವಿಲ್ಲದೆ) ಏನೊ-ನಾಟಕಾ ಮಾಡಿದರ ಕೆಟ್ಟ ಕೆಟ್ಟ ವಿಚಾರ ಮಾಡೋ practice ಆದೀತೂಂತ.

**ಅಂತಪ್ಪ:—** (ಜ್ಞಾನಿಯಂತೆ) ವಸಂತಾ, ಜಗತ್ತಿನ ಕೂಡ ನಡೆಯೋದು ಅಂದರೆ ಕೆಟ್ಟ ಜನರು ಬಂದರು ಅದರೊಳಗೆ. ಅದಕೆಯೆ ಎಚ್ಚರದಿಂದ ಮಾಡಬೇಕು ಯಾವ ಕೆಲಸನಾದರೂ ...ದೊಡ್ಡರಾಯರ ಹಾಗ ಮಾಡಿದರ ಯಾರೂ ಏನೂ ಅನ್ನೋದಿಲ್ಲ....ಆದರೂ ನೋಡು, ವಸಂತಾ, ವಯಸ್ಸಿಗೆ ಬಂದ ಹೆಂಡತಿಯ ಜೋಡಿ ಸಂಸಾರ ಮಾಡೋದು ಬಿಟ್ಟು-

**ವಸಂತ:—** (ನಡುವೆಯೆ) ಅದ್ಯಾಕೆ, ಅಜ್ಜ, ಮತ್ತೆ ಟೀಕಾರಾಯರು ವಯಸ್ಸಿಗೆ ಬಂದ ಇಬ್ಬರು ಹೆಂಡಂದಿರನ್ನ ಬಿಟ್ಟುಬಿಟ್ಟರಂತಲ್ಲ!

**ತಾತ್ಯಾಚಾರಿ:—** (ತಡೆಯದೆ) ಕೇಳಿದೆಯಾ?

**ಅಂತಪ್ಪ:—**(ಬೇಜಾರವಾಗಿ)ಎಂತಹ ದಡ್ಡನೊ ನೀನು! ಅವರು ಜ್ಞಾನಿಗಳು-

**ವಸಂತ:**— ನಮಗೂ ಜಲ್ಲಸಿ ಆಗೋದಕೆ chance ಕೊಡು, ಅಜ್ಜ

**ತಾತ್ಯಾಚಾರಿ:**— ನಾಯಿಯ ಬಾಲ! (ಅಲ್ಲಿಯೆ ಕುಳ್ಳಿರಿಸಿ) ನೋಡಿದೆಯಾ, ಹೇಗೆ ಏಳ್ಳ ಮುಕ್ಕತಾನ ಹಿರಿಯರ ಸಮಕ್ಷ! (ವಸಂತನು ಅದನ್ನು ಅವನ ಹತ್ತಿರ ಇರಿಸುವನು) ಏಸಿಲ್ಲ—ನಿನಗ—ನಿನಗ ಈ ಸಲ ಸ್ವಾಮಿಗಳು ಬಂದಾಗ ಬಹಿಷ್ಕಾರ ಹಾಕಿಸಿದರೆ ತಿಳಿಯುವದು!

**ವಸಂತ:**— (ತಿಳುಹಿಸುವವನಂತೆ) ಎಚ್ಚರ—ಅಂ. ಬಹಿಷ್ಕಾರ ಹಾಕಿಸಿದ ಮೇಲೆ ನನ್ನ ಜಾತಿ ಬದಲಾಗುವದು....ಆ ಮೇಲೆ ನಿಮ್ಮ ಮಗಳದು ಮಿಶ್ರವಿವಾಹ ಅಂತ ಒಪ್ಪಿಕೋಬೇಕಾದೀತು-ಎಚ್ಚರ—ಒಂದು ವೇಳೆ ಆ ಮೇಲೆ ನಿಮ್ಮ ಮಗಳು ನನ್ನ ಕಡೆ ಬರುವ ಹಾಗಿದ್ದರೆ ಪುನರ್ವಿವಾಹ ಮಾಡಿಕೋಬೇಕಾದೀತು—ಎಚ್ಚರ—

**ಅಂತಪ್ಪ:**— (ಕೆರಳಿ) ಎಂತಹ ಹೇಸಿ ಮಾತಾಡುವೆಯೊ—

**ವಸಂತ:**— ಬಹಿಷ್ಕಾರದ programme ಹೇಳಿದೆ, ಅಜ್ಜ.

**ಅಂತಪ್ಪ:**— (ಹಟದಿಂದ) ಹುಡುಗರ ಹಾಗೆ ಮಾಡಬೇಡ....ನಿಮ್ಮ ಮಾವನ ಪ್ರತಿಷ್ಠಾ ದೊಡ್ಡದು ಮಠದೊಳಗೆ....ಅವನಾಗಿಯೆ ಹೇಳಿದರ ನಿನಗ ತಪ್ಪಿದ್ದಲ್ಲ ಬಹಿಷ್ಕಾರ....ನೋಡಿದೆಯೊ ಇಲ್ಲೋ, ಏನಾಗೇದ ಆ ವೇಣೂಚಾರಿಯ ಸ್ಥಿತಿ! ಮನೆಯೊಳಗ ಮಗಳ ಮದಿವೆ ಮುಂದೆ ಹಾಕಿದ, ಮಠದೊಳಗ ಸ್ವಾಮಿಗಳು ಬಹಿಷ್ಕಾರ ಹಾಕಿದರು. ಈಗ ಯಾರೂ ಕೇಳೋದಿಲ್ಲ ಅವನಿಗೆ!

**ವಸಂತ:**— ಪಾಪ! ವರ ಸಿಕ್ಕದಿದ್ದರ ಅವ ಏನು ಮಾಡಬೇಕು?........ ಹಂ, ನನಗೊಂದು ವಿಚಾರ ಬಂದಿದೆ, ಅಜ್ಜ. ಎಂಟು ವರ್ಷದ ಹುಡುಗಿಗೆ ಈಗಿನ ದಿವಸದೊಳಗ ವರಾನೇ ಸಿಕ್ಕೋದಿಲ್ಲ. ಅದಕ್ಕ ಆ ಹುಡುಗಿಯ ಮನೆಯವರಿಗೆ ಬಹಿಷ್ಕಾರ ಹಾಕೋದಕಿಂತ ಯಾರು ಒಲ್ಲೆ ಅಂತಾರ ಅವರಿಗೆಯೆ ಬಹಿಷ್ಕಾರ ಹಾಕೋದು ಒಳಿತಲ್ಲ? ಇಲ್ಲದಿದ್ದರೆ ಮಠದವರೇ ತಮ್ಮ ವಶೀಲಿಯಿಂದ ಆ ಹುಡುಗಿಗೆ ಒಂದು ವರ ಗಂಟು ಹಾಕಿ ಕೊಟ್ಟರಾಯಿತು....ಬಡ್ಡಿಯ ವ್ಯವಹಾರದ

department ದ ಹಾಗೆ–ಮದಿಸೆಯದೂ ಒಂದು department ಯಾಕೆ ಸುರುವು ಮಾಡಬಾರದು ಈ ಮಠಗಳೆಲ್ಲ ?.. ಇಲ್ಲ....ಅಜ್ಜ, ಸಿಟ್ಟಿಗೇಳಬೇಡ. ಕೇಳಿಕೊ..ಹೇಗೆ ಗಂಡಸಿಗೆ ಶಿಕ್ಷಣ ಇಲ್ಲದೆ ವ್ಯವಹಾರದೊಳಗೆ ಜಾಗೆ ಇಲ್ಲ, ಹಾಗೆ ಹೆಂಗಸಿಗೆ ಮದಿವೆಯ ಡಿಗ್ರೀ ಇಲ್ಲದೆ ಸಮಾಜದೊಳಗ ಸ್ಥಾನ ಇಲ್ಲ..ಅದಕ್ಕೆ ಒಂದು ಮದಿವೆಯ ಸಾಲೆ ಸುರು ಮಾಡಬೇಕು. ೮ ವರ್ಷ ಆದ ಕೂಡಲೆ–ಮುಗಿಯಿತು ಅಜ್ಜ, ಇನ್ನೊಂದೇ ಮಾತು–ಹುಡುಗೆಗೆ ೮ ವರ್ಷ ಆದ ಕೂಡಲೆ ಮೊದಲನೆಯ ಇಯತ್ತಾ–compulsory first marriage– ಒತ್ತಾಯದ ಪ್ರಾಥಮಿಕ ವಿವಾಹ....ಗಂಡ ಸತ್ತನೊ ಆವಳು ಪಾಸಾದಳು ಅಂತ ತಿಳಿಯಬೇಕು-ಎರಡನೆಯ ಇಯತ್ತಾ; ಗಂಡ ಉಳಿದನೊ–ದೇವರೇ ನೋಡಿಕೊಬೇಕು ಆವಳನ್ನ··ಏನನ್ನುವೆ ಅಜ್ಜ ?

**ಅಂತಪ್ಪ:—** ಎಲೆಲೆ! ಎಂತಹ ಅವಿವೇಕಿ ಇರುವೆಯೊ ? ಬ್ರಾಹ್ಮಣ ಆಗಿ ಹುಟ್ಟಿದಕಾದರೂ ನಾಲ್ಕು ಸರಿಯಾದ ಮಾತು ಆಡಬಾರದೇನೊ?

**ವಸಂತ:—** ಒಂದು ಗಾದೆಯ ಮಾತು ಕೇಳಿರುವೆಯೇನು, ಅಜ್ಜ? ದೇವರ ಬಾಯಿಯಿಂದ ಬಂದ ಬ್ರಾಹ್ಮಣ ದೇವರಿಗೆಯೆ ಬಾಯಿಗೆ ಬಂದ ಹಾಗೆ ಆಡಿಕೊಂಡ–ಅಂತ !

**ತಾತ್ಯಾಚಾರಿ:—** ಅಂತಪ್ಪ, ಕೇಳಿದೆ ಇಲ್ಲೊ ? ಇನ್ನಾದರೂ ನಿನ್ನ ಹುಚ್ಚು ಹೋಯಿತೊ ಇಲ್ಲೊ ? ಇಂಥಾವ ಅಳಿಯ ಅಂತ ಹೇಳಿಕೊಳ್ಳೋದಕಿಂತ ಮಗಳು ವಿಧವಾ ಅಂತ ತಿಳಿದುಕೊಳ್ಳೋದೇನು ಕೆಟ್ಟು ?

**ವಸಂತ:—** (ಕುತೂಹಲಿಯಂತೆ) ಮಠದ fashion ದ ವಿಧವಾನೊ ಏನು ಯಮುನಾನ fashion ದ ವಿಧವಾನೊ ?

**ಅಂತಪ್ಪ:—**(ಕೆರಳಿ) ಮುಚ್ಚೊ, ಉದ್ಧಟಾ, ನಿನ್ನ ಬಾಯಿಯನ್ನು ! (ತಾತ್ಯಾಚಾರಿ ಹಣೆ ಬಡೆದುಕೊಂಡು ಮುಖ ಮುಚ್ಚುವನು)

**ವಸಂತ:—** ಸಿಟ್ಟು ಯಾಕೆ, ಅಜ್ಜ; ನೀನೇ ಹೇಳಲಿಲ್ಲೆ ಈ ಹೊತ್ತು, ವಿಧವೆಯರೊಳಗ ಗಂಗಾ–ಯಮುನಾ ಎರಡು fashion ಅಂತೆ?........

(ವಿಚಾರಿಸುವವನಂತೆ) ಆದರೂ— ಸಾಹಿತ್ಯದ ದೃಷ್ಟಿಯಿಂದ – ಕಲೆಯ ದೃಷ್ಟಿಯಿಂದ—ನೋಡಿದರೆ—ಗಂಗಾ fashion ಏ ಒಳಿತು ಅಂತ ಕಾಣಿ ಸತದೆ—ಸಮಾಜದ ಪ್ರತಿಬಿಂಬ ಮೂಡಿಸುವ ಪವಿತ್ರ fashion !

**ತಾತ್ಯಾಚಾರಿ:**—(ದಂಗುಬಡೆದು) ಅಂತಪ್ಪ, ಸಿಟ್ಟಿಗೆದ್ದು ಏನು ಪ್ರಯೋಜನ? ....ಹಂ !....ಇಂತಹ ಬ್ರಾಹ್ಮಣರಿಗಿಂತ ದೊಡ್ಡರಾಯರು ಹೇಳುವ ಹಾಗ ಹೊಲೆಯರನ್ನು ಮುಟ್ಟಿಸಿಕೊಳ್ಳೋದು ಏನು ಕೆಟ್ಟ—ಅಂತೀನಿ.

**ಅಂತಪ್ಪ:**— (ಅತ್ಯಂತ ನಿರಾಶೆ-ವಿಷಾದಗಳಿಂದ) ಛೆ—ರಾಯರ ಮನೆಗೆ ಹೋಗಿ ಬರುವದರಿಂದಾದರೂ ಸುಧಾರಿಸಿಯಾನು ಅಂತ ಮಾಡಿದ್ದೆ....

**ವಸಂತ:**— chance ಕೊಟ್ಟು ನೋಡ್ರು, ಅಜ್ಜ. ನನಗ ಬರಿಯ ಉಮೇದ ವಾರಕೀ ಕೊಟ್ಟಬಿಡಿರಿ. .election ದ ಕೆಲಸ ಒಪ್ಪಿಸಬಾರದೆ ?

**ಅಂತಪ್ಪ:**— (ಕೆರಳಿ) ನಿನಗ ಯಾರು ಬ್ಯಾಡಾ ಅಂದರು—

**ವಸಂತ:**— (ಉತ್ಸುಕತೆಯಿಂದ) ಹಾಗಾದರೆ ಯಮುನಾನ್ನ ಹೊರಗ ಹಾಕುವ ಕೆಲಸ ನನಗ ಒಪ್ಪಿಸಿ ಬಿಡಿರಿ—

**ಅಂತಪ್ಪ:**—
**ತಾತ್ಯಾಚಾರಿ:**— } ( ಬೆಪ್ಪಾಗಿ) ಏನು....?

**ವಸಂತ:**— ಆ ಎಲೆ—ಅಡಿಕೆಯ ತಾಟು ಒಂದಿಷ್ಟು ನನ್ನ ಕಡೆ ನೂಕರಿ. ಅಂತಪ್ಪ "ಹುಶ್" ಎಂದು ಕುಳಿತುಕೊಳ್ಳುವನು. ತಾತ್ಯಾಚಾರಿಯು ಮಾತಾಡವೆ ತಾಟು ವಸಂತನ ಕಡೆಗೆ ನೂಕುವನು. ವಸಂತನು ಸಮಾಧಾನದಿಂದ ವೀಳ್ಯ ತಿನ್ನಲು ಪ್ರಾರಂಭಿಸುವನು. ಕೆಲಹೊತ್ತು ನಿಃಶಬ್ದತೆ.

**ಅಂತಪ್ಪ:**— (ಬೆಪ್ಪನಂತೆಯೆ) ಅಲ್ಲೊ, ಅದಕೂ ಆದಕೂ ಏನು ಸಂಬಂಧ?

**ತಾತ್ಯಾಚಾರಿ:**— (ಸಿಟ್ಟಿನ ಅಸಹ್ಯದಿಂದ) ಅಂತಪ್ಪ! ನೀಚ—ನೀಚ – ಇದ್ದಾನ ಅವ ! ಈಗ ನಾನೂ ರಾಯರೂ ಊರಜನರ ಸಲುವಾಗಿ ಮಾತಾಡೋದು ಕೇಳಿ—

**ವಸಂತ:**— (ನಡುವೆಯೆ) ಛೆ—ಆ ಕೇಳಿದ್ದಂತೆ ! ಅದಕ್ಕಿಂತಲೂ ಹೆಚ್ಚಿನ ಅಸಿಷ್ಟು ಕೇಳೀನಿ—ಅದನ್ನೆ ಶ್ಯಾಮನಿಗೆ ಹೇಳತಾ ಕೂತಿದ್ದೆ ಅಂತ

ನಿಮ್ಮ ಹರಟೆಗೆ ಮಹತ್ವವನ್ನ ಕೊಡಲಿಲ್ಲ ನಾವು. ಅಜ್ಜ! ಯಮುನಾಸ ವಿಷಯ ಎಂತೆಂತಹ ಬೊಬ್ಬಾಟ ಆಗಿದೆ! ಗೊತ್ತಿದೆಯೆ?

**ಅಂತಪ್ಪ**— (ತಿರಸ್ಕಾರದಿಂದ) ಬೊಬ್ಬಾಟ ಏನು ಅದರಲ್ಲಿ?–ಪಾಪ! ಅನಾಥ ಆಗಿ ಗತಿ ಇಲ್ಲದೆ ಬಂದಳು, ನಾಲ್ಕು ದಿವಸ ಕೆಲಸ ಕೊಟ್ಟು ಊಟಕ್ಕೆ ಹಾಕಿದರು—

**ವಸಂತ**:— (ಗಾಂಭೀರ್ಯದಿಂದ) ಅದಲ್ಲ, ಅಜ್ಜ. ದೊಡ್ಡರಾಯರ ಮನೆತನಕ್ಕ ಕಲಂಕ ಹತ್ತುವ ಹಾಗ–ಛೆ, ಯಮುನಾ ಹೀಗೆ ಇದ್ದಾಳೆ ಅಂತ ಯಾರಿಗೂ ಕನಸು–ಮನಸಿನೊಳಗ ಅನ್ನಿಸಿರಲಿಕ್ಕಿಲ್ಲ! (ಮೆಲ್ಲಗೆ) ಅಲ್ಲ–ಯಾರೊ ತನ್ನ ಕೈ ಹಿಡಿದರೂಂತ ಊರ ಹೆಂಗಸರ ಮುಂದೆ ಅಭಿಮಾನದಿಂದ ಹೇಳಿಕೋಬೇಕೆ?

**ಅಂತಪ್ಪ**:—(ಮೂರ್ಛೆಯನ್ನ ಹೊಂದುವನೇನೊ ಎನ್ನುವಂತೆ)ಕೈ–ಹಿ–ಡಿ–ದ–ರೂ! ಏನ ಹೇಳತೀಯೊ?

**ವಸಂತ**:— (ಗಾಂಭೀರ್ಯದ ಮುದ್ರೆಯಿಂದ) ನನಗೇನು ಗೊತ್ತು, ಅಜ್ಜ? ಅಡಿಗೆ ಮಾಡುವಾಗ–ಯಾವನೊ ಮಡಿಯ ಬ್ರಾಹ್ಮಣ—

**ಅಂತಪ್ಪ**:— (ಒಮ್ಮೆಲೆ ತಾ. ಗೆ) ಯಾರೊ, ತಾತ್ಯಾಚಾರಿ? ನಿನಗ ಗೊತ್ತಿರಲೇಬೇಕು–ದಿನಾಲು ಪೂಜೆ–ನೈವೇದ್ಯ ಮಾಡುವವ ನೀ—

**ತಾತ್ಯಾಚಾರಿ**:— (ಅಸಹ್ಯದಿಂದ) ಛೆ–ಅವಳ ಕೈ ಯಾರು ಹಿಡೀತಾರೊ? ಅದೂ ಮಡಿಯೊಳಗೆ ಇದ್ದಾಗ ಅಂತೆ! ನಿನಗೆ ಇಷ್ಟು ತಿಳಿಯಬಾರದೆ?....ಹಃ, ಹುಚ್ಚು–ಹುಡುಗರ ಮಾತು ಏನ ಕೇಳುವೆ?

**ವಸಂತ**:— ಏನೊ! ಜನರು ಆಡಿಕೊಳ್ಳೋದು ಹೇಳಿದೆ....ಕೈ ಹಿಡಿದರು ಅಂತ ಯಮುನಾ ಆನಂದದಿಂದ ಹೇಳಿಕೊಳ್ಳುವಂತಹಾದು ಏನು ಇದ್ದೀತಪ! ಅಜ್ಜ! ಅದೂ–ಪೂಜೆ ಮಾಡುವಾಗ–ಅಂತ....!

**ಅಂತಪ್ಪ**:— (ಆಶ್ಚರ್ಯದಿಂದ ಸಿಟ್ಟಿನಿಂದ) ಏನೊ ಇದು ತಾತ್ಯಾ–

**ತಾತ್ಯಾಚಾರಿ**:— (ಕೆರಳಿ) ನಿನಗ ಮುದಿಹುಚ್ಚು ಹಿಡಿದಿದೆ ನೋಡೊ, ಮುಂದಿಯ ಮಾತಿನೊಳಗೆ ವಿಶ್ವಾಸ ಇಡುವೆಯಲ್ಲ ಇನ್ನೂ!

ಅಂತಪ್ಪ !....ಕೈ ಯಾರು ಹಿಡೀತಾರೆ ?....ಪಾಪ ! ದೊಡ್ಡ ಅನ್ನದ ತಪ್ಪೇಲಿ ಇಳಿಸತಿದ್ದಳು....ಎತ್ತಲಿಕ್ಕಿಲ್ಲ ಅವಳಿಗೆ ಅಂತ ಎದ್ದು ತಪ್ಪೇಲಿ ಹಿಡಿದೆ ನಾನು....ಅಕಸ್ಮಾತ್ ಇಬ್ಬರೂ ಒಂದೇ ವೇಳೆಗೆ ತಪ್ಪೇಲಿ ಹಿಡಿದೆವು, ಅನ್ನು, ನಾವು....ಕೈಗೆ ಕೈ ತಾಕಿರಬಹುದು-ನನ್ನ ಲಕ್ಷ್ಯಕ್ಕ ಸಹಿತ ಬರಲಿಲ್ಲ. .ಹಃ, ಕೈ ಹಿಡಿಯೋದು ಅಂತ !

**ವಸಂತ:—** ಅಜ್ಜ, ನಾನೇನು ಕಣ್ಣಾರೆ ನೋಡೀನಿ ಅಂತ ಉಪ್ಪು—ಕಾರ ಹಚ್ಚಿ ಹೇಳುವೆನೆ ? "ಯಮುನಾ, ನಿನಗೆ ಒಂದು ಸೀರೆ ಬೇಕು—ಕೊಡಿಸತೀನಿ" ಅಂತ ಹೇಳಿದರಂತೆ ಕೈ ಹಿಡಿದವರು !

**ಅಂತಪ್ಪ:—** (ತಿರಸ್ಕಾರದಿಂದ ತಾ. ಗೆ) ನಿನಗೇನು ದಾಡಿಯಾಗಿತ್ತೊ, ತಾತ್ಯಾಚಾರಿ ?

**ತಾತ್ಯಾಚಾರಿ:—** (ಸಿಟ್ಟಿನಿಂದ) ಏನು ಕೇಳುವೆಯೊ ಊರ ಲುಚ್ಚೆ ಜನರ ಮಾತು ?....ಹಂ....ಪಾಪ ! ಅಡಿಗೆ ಮಾಡುವಾಗ ಒದ್ದೆಯ ಸೀರೆ ಉಟ್ಟುಕೊಂಡಿದ್ದಳು—"ಏನಾದರೂ ಆದೀತು" ಅಂದೆ—ಕೆಳಗೆ ಮುಖ ಮಾಡಿ "ಬಣಗಿಸಿ ಉಟ್ಟುಕೊಳ್ಳಲಿಕ್ಕೆ ಇನ್ನೊಂದು ಸೀರೇನೇ ಇಲ್ಲ" ಅಂದಳು....ಪಾಪ ! "ಎಲೆಲೆ, ರಾಯರಿಗೆ ಹೇಳಿ ಕೊಡಿಸತೀನಿ" ಅಂದೆ....ಹುಚ್ಚು ಹುಡುಗರು—

**ವಸಂತ:—** ಇದೆಲ್ಲ ನನಗೇನು ಗೊತ್ತು, ಅಜ್ಜ. "ರಾಯರು ಹೊಲೆಯರ ಕೈ ಹಿಡಿದರು, ಅವರ ಮನೆಯ ಬ್ರಾಹ್ಮಣರು ಹೊಲೆ—ಮುಂಡೇರ ಕೈ ಹಿಡಿದರು" ಅಂತ ಜನರು ಆಡಿಕೊಳ್ಳೋದು ಕೇಳಿ ನನ್ನ ಹೊಟ್ಟೆಯೊಳಗೆ ಬೆಂಕಿ ಬಿದ್ದಿತು, ಅಜ್ಜ....ಅದಕ್ಕೇ ಯಮುನಾನ್ನ ಹೊರಗ ಹಾಕಬೇಕು ಅಂತ ನಾ ಹೇಳಿದ್ದು.

**ತಾತ್ಯಾಚಾರಿ:—** (ಸಿಟ್ಟಿನಿಂದ) ಇಂತಹಾ ಹುಚ್ಚು ಹುಡುಗೆಯರನ್ನ ಎರಡು ಏಟು ಕೊಟ್ಟು ಹೊರಗ ಹಾಕಬೇಕು.

**ವಸಂತ:—** (ಅರ್ಧ ತನ್ನಷ್ಟಕ್ಕೆ) ಆದರೂ—ಎಂಥಾಕೆ ಇದ್ದಾಳೆಯೊ ಯಾರಿಗೆ ಗೊತ್ತು ? ಹೊರಗ ಹಾಕಿದರ ಊರತುಂಬ ಹೇಳತಾ ನಡೆದಳಂದರೆ ! ಅದೂ ಒಂದು ಹೆದರಿಕೆ. ಹಾಗೆಯೆ ಬಿಟ್ಟರೆ ರಾಯರ electionದ

ಹೆದರಿಕೆ. ಛೆ—ಒಂದು ಕಡೆ ಬಾಂಧವರ ವಧ, ಒಂದು ಕಡೆ ಕಾರ್ಯಹಾನಿ; ಅರ್ಜುನನ ಹಾಗೆ ಆಗಿದೆ ನೋಡು, ಅಜ್ಜ, ನನ್ನ ಸ್ಥಿತಿ.

**ಅಂತಪ್ಪ:—** (ತೀರ್ಮಾನಿಸುವವನಂತೆ) ನನಗೆ ಅನ್ನಿಸತದೆ—ಈಗ ನಡೆದುದಕ್ಕೆ ಕಣ್ಣುಮುಚ್ಚಿ ಬಿಡಬೇಕು ಅಂತ....ಈಗೆಯೆ ಏನಾದರೂ ಮಾಡಿದರೆ ಜನರ ಸಂಶಯಾನೂ ಹೆಚ್ಚಾದೀತು—ಯಾಕೊ, ತಾತ್ಯಾಚಾರೀ?

**ತಾತ್ಯಾಚಾರಿ:—** (ಸತ್ಯದ ಹಟದಿಂದ) ಸಂಶಯ ಅಂತೆ! ನಿರುದ್ಯೋಗ, ನಿಂತ ನೀರು ಅದು, ಅಂತಪ್ಪ! ಅದಕ್ಕೆ ಹೆದರಿ—ಪಾಪ! ಆ ಬಡ ಹುಡುಗೆಯನ್ನು ಉಪವಾಸ ಸಾಯಲಿ ಅಂತ ಹೊರಗೆ ಹಾಕುವದೆ?

**ಅಂತಪ್ಪ:—** (ಗಾಬರಿಯಿಂದ) ಅಲ್ಲೊ—ಮರೆತೇ ಬಿಟ್ಟೆ ಅಲ್ಲ!....ಅವಳನ್ನು ಮನೆಯೊಳಗೆ ಇಟ್ಟುಕೊಂಡರೆ ಬ್ರಾಹ್ಮಣರ voteಇನ ಗತಿ ಏನೂ ಅಂತೀನಿ.

**ತಾತ್ಯಾಚಾರಿ:—** (ತಿರಸ್ಕಾರದಿಂದ) ಇದೇ ಊರೊಳಗೆ ಹುಟ್ಟಿ ಮುದುಕ ಆದೆ, ಅಂತಪ್ಪ, ನೀನೂ ಹೆದರುವೆ ಅಲ್ಲ! ನಮಗ ಗೊತ್ತಿಲ್ಲೇನು ಬ್ರಾಹ್ಮಣರೆ ಇವರು? ಹಾಗೆ ಹೇಳಬೇಕು ಅಂದರೆ—ಯಾರ ಮನೆಯೊಳಗೆ ಮಠದ ಅನ್ನ–ಹುಳಿಯ ನಾತು ಇಡಗೇದ ಅವರಲ್ಲಿ ಸಹಿತ ಮೂಗು ಮುಚ್ಚುವಂತಹ ಅಧರ್ಮ ನಡೆದಿದೆ....ತಮ್ಮದು ಹೊರ ಬಿದ್ದೀತೂ ಅಂತ ಯಾರೂ ಪಿಟ್ಟೆನ್ನೋದಿಲ್ಲ....ಅಷ್ಟಕ್ಕೂ ವಿಚಾರಿದರೆ–ಒಂದು ಮುಹೂರ್ತ ನೋಡಿ ಆಕೇನ್ನ ಶುದ್ಧ ಮಾಡುವ ವಿಚಾರ ಅದೆ ಅಂತ ಹೇಳಿದರಾಯಿತು.

**ವಸಂತ:—** ಅಹುದು, ಅಜ್ಜ. ಕನ್ಯಾಗತಕ್ಕ ಗಂಗಾ ಬಂದು ಬಳೆದುಕೊಂಡು ಹೋಗ್ತಾಳ ಅಂತ—

ಅಂತಪ್ಪನು ಸಿಟ್ಟಿನಿಂದ ಏನನ್ನೊ ಹೇಳಬೇಕೆನ್ನುವಷ್ಟರಲ್ಲಿ ಒಳಗೆ ದೊಡ್ಡರಾಯರ ದನಿ. ''ಶ್ಯಾಮಾ ಆಕೇನ್ನ ಕರೆದುಕೊಂಡು ಬಾರೊ''.

**ಅಂತಪ್ಪ:—** (ಮೆಲುದನಿಯಲ್ಲಿ ಸಿಟ್ಟುಮಾಡುತ್ತ) ಇನ್ನಾದರೂ ಸಾಕು ಮಾಡು ನಿನ್ನ ಅಪದ್ಧ ಮಾತಾಡುವದನ್ನ—

" ಅಕ್ಕನ್ನೂ ಯಮುನಾನ್ನೂ ಇಬ್ಬರನ್ನೂ ಕರೆದುಕೊಂಡು ಬಾರೊ " ಎನ್ನುತ್ತ ದೊಡ್ಡರಾಯರು ಬರುವರು. ಆದೇ ಹೊರಗಿನಿಂದ ಬಂದುದರಿಂದ ಅವರ ವೇಷವು ಸೊಗಸಾಗಿವೆ, ಚೊಕ್ಕಟ ಇವೆ.

**ದೊಡ್ಡರಾಯರು:**— (ಎದುರಿನ ಲೋಟಿನ ಮುಂದೆ ನಿಂತು ಒಬ್ಬೊಬ್ಬರನ್ನು ನೋಡುತ್ತ) ಈ ಜನರಿಗೆ ಉಪಕಾರ ಮಾಡಬೇಕು ಅಂದರೆ, ವ್ಯರ್ಥ.... ಹಂ....ಜಲಸಾ (ಸಂಗೀತ ಕಚೇರಿ) ಅಂತ ಗೊತ್ತು ಮಾಡಿತ್ತು. ಏನೊ ಹೆಸರಾದ ಗಾಯಕಿ, ಎಂದಿಲ್ಲಾದರ ಒಂದಿನ ಬಂದಾಳೆ. "ಒಂದು programme ಗೊತ್ತು ಮಾಡಿರಿ, ರಾಯರೆ" ಅಂದರು. ಹುಂ-ಅಂದೆ. ಹೋಗಿ ನೋಡತೀನಿ! ಅರ್ಧ ತಾಸು ನೋಡಿದೆ, ಒಂದು ತಾಸು ನೋಡಿದೆ, ಒಂದೂವರೆ ತಾಸು ನೋಡಿದೆ-ನಾಚು, ನಾಚು, ಬರಿಯ ನಾಚೇ ನಡೆದಿದೆ --ತಾತ್ಯಾಚಾರೀ ! " ಇದೇನರೊ!" ಅಂತ ಕೇಳಿದೆ, "ರಾಯರ, ಏನೊ—electionದ ಸಮಾರಂಭ. ಉತ್ಸವ ಅಂತ. ಹುರುಪು ಇರಲಿ ಅಂತ ಇದನ್ನೆ ಗೊತ್ತು ಮಾಡಿದೀವಿ" ಅಂತ ಹಲ್ಲು ಕಿರೀತಾರೆ! ನೋಡು, ವಸಂತಾ, ತಡೆಯುವಷ್ಟು ಕೋಪ ಬಂದಿತು. ಅದನ್ನ ನೋಡಿ ಅವರೂ ಗಾಯನ ಪ್ರಾರಂಭ ಮಾಡಿಸಿದರು. ಅಲ್ಲೊ, ಅಂತಪ್ಪ, ಕೈತುಂಬ ಕೆಲಸ-ಮಧ್ಯರಾತ್ರಿಯೊಳಗ ಗಾಯನ ಕೇಳತಾ ಕೂಡಲಿಯಾ—ಅಂತ ಎದ್ದು ಬಂದು ಬಿಟ್ಟೆ........ಎಷ್ಟೊತ್ತು ನಡೆಯೋದೊ ಏನೊ ಆ programme! (ಕುಳಿತುಕೊಂಡು) ಹಂ-ಅಂತಪ್ಪ- ವಸಂತಗ ತಿಳುಹಿಸಿದೆಯಾ?....ಏನು ಮಾಡೋದು ಹೇಳು, ವಸಂತಾ? ಜನರ ಸೇವಾ ಅಂದರ ಹೀಗೆ ನೋಡು... ಬಹುಜನರ ಹಿತಕ್ಕಾಗಿ ಒಬ್ಬರಿಗೆ ಕಟುಕ ಆಗುವ ಪ್ರಸಂಗ ಬಂದರೆ ಆಗಲೇಬೇಕು—

**ವಸಂತ:**—ಅಷ್ಟು ನನಗೆ ತಿಳಿಯುವದಿಲ್ಲವೆ, ರಾಯರೇ ? ಅಂತಹರಿಗೆ ಇದು ವರೆಗೆ ಆಶ್ರಯ ಕೊಟ್ಟದ್ದೇ ತಮ್ಮ ದೊಡ್ಡಮನಸ್ಸು. ಏನೊ- ದುಷ್ಟರಿಗೆ ಬುದ್ಧಿ ಕಲಿಸಬೇಕೂಂತ—

**ತಾತ್ಯಾಚಾರಿ:**— (ಎಡಬದಿಯ ತೆಕ್ಕೆಯ ಕಡೆಗೆ ಹೋಗುತ್ತ) ದುಷ್ಟರದೇನು ಸಂಬಂಧವೊ ಇದರೊಳಗೆ?

**ವಸಂತ:—** ನಿಮ್ಮ ಸಲುವಾಗಿ ಮಾತಾಡಲಿಲ್ಲ. (ದೊಡ್ಡರಾಯರು ಗಹಿಗಹಿಸಿ ನಗುವರು. ಅಂತಪ್ಪನು ನಗೆಮೊಗದಿಂದಲೆ ತಲೆ ಅಲ್ಲಾಡಿಸುತ್ತ ಏಳುವನು)ಯಮುನಾಳ ಮಾತು ಹೇಳಿದೆ—

**ತಾತ್ಯಾಚಾರಿ:—** ಪಾಪ! ಕೆಟ್ಟ ವೇಳೆ ಬಂದಿತೂಂತ ಹೀಗೆ ಮಾಡಬೇಕಾಗಿದೆ ರಾಯರಿಗೆ—ಯಾಕೊ ಅಂತಪ್ಪ?

**ಅಂತಪ್ಪ:—** (ವಸಂತನ ಎಡಬದಿಯ ತೆಕ್ಕೆಯ ಕಡೆಗೆ ನಡೆಯುತ್ತ) ಇದನ್ನೇನು ಹೇಳೋದು, ತಾತ್ಯಾಚಾರೀ? ಅನಾಥರಿಗೆ ಆಶ್ರಯ ಕೊಡುವ ದೊಡ್ಡಮನಸನ್ನೂ, ಧೈರ್ಯ ಒಬ್ಬರಿಗಾದರೂ ಅದೆ ಅಂತ ನಮ್ಮ ಧರ್ಮ, ನಮ್ಮ ದೇವರು ಉಳಿದಿವೆ. (ಕುಳಿತುಕೊಳ್ಳುವನು)

ಶ್ಯಾಮು, ಯಮುನಾ, ವೇಣಕ್ಕ ಬರುವರು. ಶ್ಯಾಮುನು ವಸಂತ—ಮತ್ತು—ತಾತ್ಯಾಚಾರಿಯ ನಡುವೆ ಕೂಡ್ರುವನು. ವೇಣಕ್ಕನು ರಂಗದ ಬಲಬದಿಗೆ ನಿಂತುಕೊಳ್ಳುವಳು. ಯಮುನಾ ಬಾಗಿಲದ ಹತ್ತಿರವೆ ತಡೆಯುವಳು.

**ವೇಣಕ್ಕ:—** ನಿಮಗ ಚಹಾ ಅದು ಏನು ಬೇಕಾಗಿಲ್ಲ ಅಹುದಲ್ಲೊ? ಯಮುನಾ ಹೋಗಿಬಿಡಲಿ.

**ದೊಡ್ಡರಾಯರು:—** ಛೆ-ಛೆ- ಆಕೆಳ ಸಲುವಾಗಿಯೆ ವಿಚಾರ ಮಾಡಬೇಕಾಗಿದೆ—

**ವೇಣಕ್ಕ:—** ಮನೆಯ ಕೆಲಸಕ್ಕ ಅಪರಾತ್ರಿಯ ಹೊರತು ವೇಳೇನೇ ಸಿಗೋದಿಲ್ಲ ಇವರಿಗೆ. ಮತ್ತೆ ನಾಳೆ ಲಗೂ ಏಳಬೇಕಾಗೋದು ನಮಗೆ....ಕೂಡು ಯಮುನಾ (ತಾನು ಕೂಡ್ರುವಳು) ಕೂತು, ಒಂದು ಮಾತಿನೊಳಗೆ ಮುಗಿಸೋದೂ ಅಷ್ಟರೊಳಗೆಯೆ ಆದೆ...ಕೂಡು. (ಯಮುನಾ ಕುಳಿತುಕೊಳ್ಳುವಳು)

**ದೊಡ್ಡರಾಯರು:—** (ಮೊದಲು ಯಮುನಾನ್ನೂ ಆ ಮೇಲೆ ಎಲ್ಲರನ್ನೂ ನೋಡಿ) ಹಂ—ಈಗ—ಯಮುನಾ—ನಿನ್ನ ವಿಷಯವಾಗಿಯೆ ಮಾತಾಡಬೇಕಾಗಿದೆ—

**ವೇಣಕ್ಕ:—** (ಬೇಜಾರದಿಂದ) ಅಯ್ಯ! ಅದೇ ಏನದೆ ಹೇಳಿರಿ ಅಂತ ಯಾವಾಗಿನಿಂದ ಒದರಕೋತೀನಿ—ಮತ್ತೆ—

**ದೊಡ್ಡರಾಯರು:**— (ಅಪಮಾನಿತರಾಗಿ) ನನ್ನ ಮಾತನ್ನಾದರೂ ಪೂರ್ತಿ ಕೇಳತಿಯೋ ಇಲ್ಲೋ? ನಡುವೆ ಮಾತಾಡಬೇಡ....ಹಂ...ಈಗ ನಮ್ಮಲ್ಲಿ ಹೊಲೆಯರ ಸ್ಥಿತಿ ಎಷ್ಟು ಕೀಳಾಗಿದೆ? ಅವರು ನಮ್ಮ ಧರ್ಮದವರು ಅಂತ ಹೇಳಲಿಕ್ಕೆ ನಾಚಿಕೆ—

**ವೇಣಕ್ಕ:**— (ಪೋಲಿನಂತೆ) ನುತ್ತ ತಮ್ಮ ಮಾತೇ!

**ದೊಡ್ಡರಾಯರು:**— (ಕೆರಳಿ) ಎಲೆ——

**ಅಂತಪ್ಪ:**—(ಸಮಾಧಾನದಿಂದ) ವೇಣಕ್ಕಾ, ಅದನ್ನೆ-ಅದನ್ನೆ ತಿಳಿಸಿ ಹೇಳ್ತಾರೆ ರಾಯರು.

**ದೊಡ್ಡರಾಯರು:**— (ಗಟ್ಟಿಯಾಗಿ) ಅವರು ನಮ್ಮ ಧರ್ಮದವರು ಎಂದು ಹೇಳಲಿಕ್ಕೆ ನಾಚಿಕೆ ಬರುವದು—ಅಂತಹ ಅವರ ಸ್ಥಿತಿ. (ಆವೇಶದಿಂದ) ಜಗತ್ತಿನೊಳಗೆ ನಾವು ಸುಧಾರಿಸಿದವರು ಅಂತೆ ಅನ್ನಿಸಿಕೊಳ್ಳಬೇಕಾದರೆ, ಜಗತ್ತಿನೊಳಗೆ ಎಂದಿನಿಂದಲೂ ನಮ್ಮ ಸಂಸ್ಕೃತಿ ದೊಡ್ಡದು ಅಂತೆ ಅನ್ನಿಸಿಕೊಳ್ಳಬೇಕಾದರೆ, ಶಂಕರ-ರಾಮಾನುಜ-**ಶ್ರೀಮದಾನಂದತೀರ್ಥ**ರಂತಹ ಮತ-ಸ್ಥಾಪಕರು ನಮ್ಮಲ್ಲಿಯೆ ಹುಟ್ಟಿ-ಜನಿಸಿದರು ಅಂತೆ ಅಭಿಮಾನ ತಾಳಬೇಕಾದರೆ— (ವೇಣಕ್ಕನು ತೂಕಡಿಸುತ್ತಿರುವದನ್ನು ನೋಡಿ, ಕೆರಳಿ) ಏ—ಏನ ಕೇಳತೀಯೊ ನಿದ್ದೆ ಮಾಡತೀಯೊ?

**ವೇಣಕ್ಕ:**— (ಒಮ್ಮೆಲೆ ಎಚ್ಚತ್ತು) ಉಶ್—ತಾಯಿಾ-ಇಲ್ಲದ ಸುದ್ದಿ ಎಲ್ಲಾ ಕೇಳಲಿಕ್ಕೆ ಯಾರು ನಿದ್ದೆ ಕಟ್ಟಿಯಾರು—ಮುಂಜಾನೆಯು ಕೆಲಸ ಕಟ್ಟಿ ನಿಂತೀತು—ಮನೆಯುದೇನೊ ವಿಚಾರ ನಡೆದದೆ ಅಂದರೆ—

**ಅಂತಪ್ಪ:**— (ಸಮಾಧಾನದಿಂದ) ವೇಣಕ್ಕಾ, ಹೇಳ್ತಾರ, ಅದನ್ನೆ ಸಂಬಂಧ ಹಚ್ಚಿ ಹೇಳ್ತಾರ ಈಗ.

**ದೊಡ್ಡರಾಯರು:**— (ಅತ್ಯಂತ ತಿರಸ್ಕಾರದಿಂದ) ಛೆ! ಹೆಂಗಸರಿಗೆ ತಿಳುಹಿಸೋದೆ ಕಷ್ಟ.

**ವಸಂತ:**— ವೇಣಕ್ಕಾ, ಇದೇ ಈಗ ರಾಯರು ಒಂದು ಮಹತ್ವದ ಕೆಲಸ ಆದಕ್ಕ ತಾವು ಟೊಂಕ ಕಟ್ಟಿ ನಿಂತಾರೆ ಅಂತ ಹೇಳಿದರು.

**ದೊಡ್ಡರಾಯರು:**—ಹೆಃ–ಅದಕ್ಕೇನು ತಿಳಿಯಬೇಕು ಇದೆಲ್ಲ!....ಹುಂ.. ನಮ್ಮ ಸಮಾಜ, ನಮ್ಮ ಸಂಸ್ಕಾರ ಇವುಗಳ ಪುನರುದ್ಧಾರಕ್ಕೆ ಕಷ್ಟ ಬಡುವವರಲ್ಲಿ **ನಾ** ಒಬ್ಬ, ತಿಳಿಯಿತೆ? ಈಗ ನಾನು ಮುನಿಸಿಪಾಲ್ಟಿಗೆ ಆರಿಸಿ ಬಂದರೆಯೆ ಹರಿಜನರ ಉದ್ಧಾರ. ನಾನು ಆರಿಸಿ ಬರ**ಬಾರದೂ** ಅಂತೆ ಮಿಕ್ಕವರ–ಅದೇಕೆ? ಮೂರ್ಖರ ಪ್ರಯತ್ನ.

**ವಸಂತ:**—(ಸಿಟ್ಟು ತೋರಿಸಿ) ಮೇಲೆ ತಮ್ಮ ಮೂರ್ಖತನ ಸತ್ತಾತನ ಧರ್ಮ ಅಂತ ಅವರ ಜಂಭ.

**ತಾತ್ಯಾಚಾರಿ:**—(ಜ್ಞಾನಿಯ ಹಟದಿಂದ) 'ಸತ್ತಾತನ' ಅಲ್ರೋ! 'ಸನಾತನ.'

**ದೊಡ್ಡರಾಯರು:**— ಯಾವ 'ತನ'ನೇ ಇರಲಿ..ಇವರಲ್ಲಿ ಮಾತ್ರ ಒಳ್ಳೆತನ ಇಲ್ಲ. ನನ್ನ ವಿರುದ್ಧ ಹುಡಿ ಇಲ್ಲದ ಆರೋಪ ಹೊರಿಸತಾರ ನನ್ನ ಮೇಲೆ....ಹಂ....ಯಮುನಾ, ನೀ ನಮ್ಮಲ್ಲಿದ್ದು ಎಷ್ಟು ವರ್ಷ ಆಯ್ತು?

**ವೇಣಕ್ಕ:**—(ಹಿರಿತನದ ದನಿಯಲ್ಲಿ) ನಾಲ್ಕು ವರ್ಷ ಆಗತದೆ–ಬರುವ ತುಳಸಿ–ಮದಿವೆಗೆ.

**ದೊಡ್ಡರಾಯರು:**— (ದೊಡ್ಡಸ್ತನದಿಂದ) ಯಮುನಾ, ಇಂದಿನ ತನಕ ನಿನಗೆ ಒಂದು ಶಬ್ದ ಆಡಿಲ್ಲ, ಒಂದು ದೋಷ ಹೊರಿಸಿಲ್ಲ, ಒಂದು ತಪ್ಪು ಹುಡುಕಿಲ್ಲ ನಿನ್ನ ಕೆಲಸದ್ದೊಳಗೆ. ಆದರೂ ಸದ್ಯಕ್ಕೆ ನಾನು ಕೈಕೊಂಡ ಸಮಾಜಸೇವೆಗಾಗಿ–ನಿನ್ನದೇನೂ ದೋಷ ಇಲ್ಲದೆ, ನನ್ನದು ಎಳ್ಳಷ್ಟು ಇಚ್ಛಾ ಇಲ್ಲದೆ–ನಿನ್ನನ್ನು ಕೆಲಸದಿಂದ ಬಿಡಿಸಬೇಕಾಗಿದೆ.

**ವೇಣಕ್ಕ:**— (ಸಂಪೂರ್ಣ ಎಚ್ಚತ್ತು ಕಣ್ಣು ಒರೆಸಿಕೊಂಡು) ಏನು?

**ಅಂತಪ್ಪ:**— (ಲಗಬಗೆಯಿಂದ) ಮುಂದ ಕೇಳಿರಿ, ವೇಣಕ್ಕಾ.

**ದೊಡ್ಡರಾಯರು:**— (ಯಾವದನ್ನೂ ಲಕ್ಷ್ಯಕ್ಕೆ ತಾರದೆ) ಯಮುನಾ, ನೀನೇ ತಿಳಿದು ನೋಡು. ಏನೊ ಒಂದು ಕಾರಣದಿಂದ ನೀನು ನಮ್ಮಲ್ಲಿಯೆ ಉಳಿದರೆ ನಾನು ಆರಿಸಿ ಬರುವಂತಿಲ್ಲ; ನಾನು ಆರಿಸಿ ಬರದಿದ್ದರೆ ಹೊಲೆಯರ ಉದ್ಧಾರ ಆಗುವಂತಿಲ್ಲ; ಹೊಲೆಯರ ಉದ್ಧಾರ ಆಗದೆ

ನಮ್ಮ ಸಮಾಜ, ನಮ್ಮ ಸಂಸ್ಕಾರ ಉಳಿಯುವ ಹಾಗಿಲ್ಲ. ಒಂದು ಕಡೆ, ಕೈಲಾದಷ್ಟು ಸಹಾಯ ಮಾಡಿ ನಿನಗೆ ಆಶ್ರಯ ಕೊಡುವದು; ಇನ್ನೊಂದು ಕಡೆ,–ಜೀವದ ಆಹುತಿಯಾದರೂ ಪರಿವೆ ಇಲ್ಲ–ಸಾವಿರಾರು ಅಜ್ಞಾನಿ ಅನಾಥರನ್ನು ಉದ್ಧರಿಸುವದು. ಒಂದಕ್ಕೊಂದು ವಿರೋಧ ಬಂದಿದೆ ಈ ಎರಡು ಸತ್ಕಾರ್ಯಗಳಲ್ಲಿ. ಮಾಡುವದೇನು? ಬಹುಜನರ ಹಿತಕ್ಕಾಗಿ, ಸಮಾಜದ ಏಳ್ಗೆಗಾಗಿ–ತನ್ನದೇ ಆಗಲಿ, ಇನ್ನೊಬ್ಬನದೇ ಆಗಲಿ–ಒಂದು ವ್ಯಕ್ತಿಯು ಆಹುತಿಯಾಗಬೇಕಾಗಿದ್ದರೆ ಅಷ್ಟು ಕಟುಕರಾಗಬೇಕಲ್ಲವೆ ?

**ವಸಂತ:**— ಹಿಯರ್ ಹಿಯರ್.

**ವೇಣಕ್ಕ:**— ಅಯ್ಯೊ! ಏನು ಮೋಜು ಮಾತಾಡತೀರಿ ನೀವೆಲ್ಲಾ ! ಹೊಲೆಯರ ಉದ್ಧಾರ ಮಾಡಬೇಕೂಂತ ಗತಿ ಇಲ್ಲದ ಒಂದು ಬ್ರಾಹ್ಮಣರ ಹುಡುಗೇನ್ನ ಹೊರಗ ಹಾಕಬೇಕೆ?

**ಯಮುನಾ:**— (ಒಮ್ಮೆಲೆ) ನಾನು–ನಾನು ಬ್ರಾಹ್ಮಣರಾಕೆ ಅಲ್ಲ....(ಬಿಕ್ಕುವಳು)

**ದೊಡ್ಡರಾಯರು:**— ಏನು........
**ಅಂತಪ್ಪ:**— (ಒಮ್ಮೆಲೆ) ಅಂ........
**ತಾತ್ಯಾಚಾರಿ:**— ಎಲಲ........

**ವೇಣಕ್ಕ:**— ಯಮುನಾ, ನಿದ್ದೆಗಣ್ಣಿನೊಳಗ ಏನೇನೊ ಮಾತಾಡತಾ ಇಲ್ಲಿ ಕೂಡಬೇಡ..ಹೋಗೋಣ ನಡೆ–ತಾಯೀ!–ಇಲ್ಲದ ರಗಳೆ.... (ಏಳುವಳು.)

**ಅಂತಪ್ಪ:**— ಅಂ....ನಿನ್ನ ಜಾತಿ ಯಾವುದು ?

**ಯಮುನಾ:**— (ಮುಖ ಮುಚ್ಚಿಕೊಂಡು) ನನಗೆ–ನನಗೆ–ಗೊತ್ತಿಲ್ಲ.

**ತಾತ್ಯಾಚಾರಿ:**— (ಗದ್ದರಿಸಿ) ಏನು?(ಯಮುನಾ ಗಾಬರಿಯಿಂದ ಎದ್ದು ನಿಲ್ಲುವಳು.)

**ವೇಣಕ್ಕ:**— ಯಾಕೆ ಹೆದರಿಸತೀರಿ ಬಿಡಿರಿ ಆ ಹುಡುಗೇನ್ನ..ಹೊಲೆಯರನೆಲ್ಲಾ ಮುಟ್ಟಿಸಿಕೊಳ್ಳಲಿಕ್ಕೆ ನಿಂತವರಿಗೆ ಜಾತಿ ಏನು ಮಾಡೋದೊ ತಕ್ಕೊಂಡು ?....ಗಂಡಸರ ಜಾತಿ ಎಲ್ಲಾ ವಿಚಿತ್ರ ಕಾಣಿಸತದೆ !

**ದೊಡ್ಡರಾಯರು:—** (ದರ್ಪದಿಂದ) ಸುಮ್ಮನೆ ಕೂಡೆ ನೀನು! ಯಮುನಾ -ಹೆದರಬೇಡ-ಹೇಳುವದೆಲ್ಲ ಹೇಳಿಬಿಡು.

**ಶ್ಯಾಮು:—** (ಕಳಕಳಿಯಿಂದ) ನೀನು ಯಾವ ಜಾತಿಯವಳಿದ್ದರೂ ನಿನಗೆ ಈ ಮನೆಯೊಳಗೆ ಹೆದರಿಕೆ ಇಲ್ಲ.

**ತಾತ್ಯಾಚಾರಿ:—** ಅದೇ ಹೇಳ್ತೀನಿ-ಮೊದಲು ಜಾತಿ ಯಾವುದು ಗೊತ್ತಾಗಬೇಕೊ ಇಲ್ಲೋ! ಹಃ ಹಃ (ಹಲ್ಲು ಕಿರಿಯುವನು)

**ಯಮುನಾ:—** (ಉದ್ವೇಗದಿಂದ) ನನಗೆ ನಿಜವಾಗಿಯೆ ಗೊತ್ತಿಲ್ಲ....ನನಗೆ ತಿಳಿಯಹತ್ತಿದಂದಿನಿಂದ ಯಾರೂ ಮುಟ್ಟಿಸಿಕೊಂಡಿಲ್ಲ ನನ್ನನ್ನು.... ನನ್ನ ಮದಿವೆ ಆಯ್ತು. ಆದರೂ ನನ್ನನ್ನು ಮುಟ್ಟಿಸಿಕೊಳ್ಳಲಿಲ್ಲ.... ಮುಂದೆ-ಮುಂದೆ ಹೀಗೆ ಆಯ್ತು-ಆವಾಗಲೂ ನನ್ನನ್ನು ಯಾರೂ ಮುಟ್ಟಿಸಿಕೊಳ್ಳಲಿಲ್ಲ.... ನಾನು (ಬಿಕ್ಕುತ್ತ) ನಾನು ಹೊಲೆಯರಾಕೆ ಇದ್ದಿರಬೇಕು ಅಂತ ನನಗೆಯೆ ವಿಚಾರ ಬಂದಿತು....ಈ ಊರಲ್ಲಿ ನೀವು ಹೊಲೆಯರ ಉದ್ಧಾರ ಮಾಡತೀರಿ ಅಂತ ಕೇಳಿ ನಿಮ್ಮ ಕಡೆಗೆ ಓಡಿ ಬಂದೆ..(ಕಳವಳದಿಂದ) ಅಯ್ಯೋ! ನಾನು ಬ್ರಾಹ್ಮಣರಾಕೆ ಅಲ್ಲ-ರಾಯರೆ, ನನ್ನನ್ನು ಬ್ರಾಹ್ಮಣರಿಗೆ ಒಪ್ಪಿಸಬೇಡಿರಿ....ನನ್ನ....ನನ್ನ.... ಅಯ್ಯೋ! ನನ್ನ ಊರೊಳಗಿನ ಬ್ರಾಹ್ಮಣರೆಲ್ಲ ನಾನು ರೂಪ ಕೆಡಿಸಿ ಕೊಂಡು ಇರಬೇಕೂಂತ ಹೇಳಿದರು..ಓಡಿ ಬಂದೆ..ರಾಯರ, ನಾನು ಬ್ರಾಹ್ಮಣರಾಕೆ ಅಲ್ಲ, ನನಗ ಶುದ್ಧ ಆಗೋದಿಲ್ಲ..ನಾನು ಅಶುದ್ಧ ಹೊಲೆಯರಾಕೆ - ಹೊಲೆಯರಾಕೆ - ನನ್ನನ್ನು ಯಾರೂ ಮುಟ್ಟಿಸಿಕೊಂಡಿಲ್ಲ..ನಿಮ್ಮ ಜೋಡು ತಲೆಯ ಮೇಲೆ ಇಟ್ಟು ಕೊಂಡು ಹೇಳತೀನಿ....ನನ್ನನ್ನು ಬ್ರಾಹ್ಮಣರಿಗೆ ಒಪ್ಪಿಸಬೇಡಿರಿ.

**ವೇಣಕ್ಕ:—** (ಕಣ್ಣೀರು ಒರೆಸಿಕೊಳ್ಳುತ್ತ ಅವಳ ಹತ್ತಿರ ಹೋಗಿ ಅವಳ ಬೆನ್ನು ಮೇಲೆ ಕೈಯ್ಯಿಟ್ಟು) ಹುಚ್ಚು ಹುಡುಗೆ! ನಿನಗ ಯಾರೇನು ಅಂದರು ಈಗ ಗಂಡಸರ ಮಾತೆಲ್ಲ ಮನಸಿಗೆ ಹಚ್ಚಿಕೊಂಡರೆ ಹೆಂಗಸರ ಬಾಳುವೆ ನಡೆಯೋದು ಹೇಗೆ?....ಉಹುಂ....ಅಳಬೇಡ; ಯಾರು ಅವರು ನೀ ಬ್ರಾಹ್ಮಣರಾಕೆ ಅಲ್ಲ ಅಂದವರು?

**ಯಮುನಾ:**— (ಅವಳನ್ನು ತಬ್ಬಿ) ಅಯ್ಯೋ, ವೇಣಕ್ಕಾ, ಬ್ರಾಹ್ಮಣರಾಕೆ ಆಗೋದು ಬೇಡ, ಬೇಡ ನನಗೆ.

**ವಸಂತ:**— (ಸಿಟ್ಟು-ಕಳವಳಗಳನ್ನು ತಡೆಮಕೊಳ್ಳುತ್ತ) ಯಮುನಾ, ಹೆದರ ಬೇಡ....ಮತ್ತೆ ಯಾವ ವಿಚಾರವೂ ಇಲ್ಲ. ನೀನು ಇದ್ದಂತೆಯೆ ಇರುವೆಯಂತೆ. ಆದರೂ ನಾಲ್ಕು ಹೊಟ್ಟೆಕಿಚ್ಚಿನ ಜನರು ನಿನ್ನ ಹಾಗೆ ಇದ್ದ ವಿಧವೆಯರು ಧರ್ಮದ ವಿರುದ್ಧ, ಅದಕಾಗಿ ರಾಯರಿಗೆ vote ಉ ಕೊಡಬಾರದು ಅಂತ ಆಟ ಹೂಡಿಯಾರ-

**ದೊಡ್ಡರಾಯರು:**— (ಲಗಬಗೆಯಿಂದ) ಹಂ-ಅದೇ-ಅದೇ, ಯಮುನಾ. . ಮತ್ತೆ ಯಾವ ವಿಚಾರವೂ ಇಲ್ಲ....ಹಂ....ಇಲ್ಲಾದರೆ ನಿನ್ನ ಸಮಕ್ಷಮ ಮಾತಾಡತಿದ್ದೆನೆ ಇದನ್ನೆಲ್ಲ ?

**ವಸಂತ:**— ಕಡೆಗೆ ಏನಿಲ್ಲೆಂದರೂ election ಮುಗಿಯುವ ವರೆಗೆ ಎಲ್ಲಿ ಯಾದರೂ ಹೋದರೆ ಸಾಕು ಅಂತ-

**ತಾತ್ಯಾಚಾರಿ:**— ಹಂ....ಅಷ್ಟು ಮಾಡಿ ಬಿಟ್ಟರಾಯಿತು....ಛೆ. . ನಿನ್ನನ್ನು ಹೊರಗ ಹಾಕುವರು ಅಂತ ತಿಳಿದಿರುವೆಯೇನು? (ಸುಳ್ಳು ನಗೆ ನಗುವನು)

**ಯಮುನಾ:**— (ಕಣ್ಣೀರು ಒರೆಸಿಕೊಳುತ್ತ-ಅಧೈರ್ಯದಿಂದ) ನಾ--ನಾನು ವಸಂತರಾಯರಿಗೆ ಹೇಳೀನಿ....ನಾಳೆ ಪಂಢರಪುರಕ್ಕೆ ಹೋಗತೀನಿ.

**ದೊಡ್ಡರಾಯರು:**— (ಬೆದರಿ ಅದನ್ನು ತೋರಿಸಬಾರದೆಂದು) ಹಂ........ಪಂಢರಪುರಕ್ಕೆ ?...ಅಷ್ಟು ದೂರೇನು ಹೋಗುವ ಕಾರಣ ಇಲ್ಲ.....

**ಅಂತಪ್ಪ:**— (ಮಾತಾಡಬೇಕೊ ಮಾತಾಡಬಾರದೊ ಎಂಬ ಪೇಚಿನಲ್ಲಿ ಸಿಕ್ಕು) ಪಂಢರಪುರ-ಅಂದರ. . ಮತ್ತೆ ಜನರಿಗೆ....ಅಂ....ಸಂಶಯ-ಸಂಶಯ-ಅಂದೆ -ಹಂ ! ಯಾಕೊ, ತಾತ್ಯಾಚಾರೀ ?

**ತಾತ್ಯಾಚಾರಿ:**— (ಒನ್ಮೆಲೆ) ಏನು ಸಂಶಯ, ಸಂಶಯ ಅಂತೆ ಹಚ್ಚಿರುವೆಯೊ ? ಅವಳ ಇಷ್ಟ ಬಂದಲ್ಲಿ ಹೋಗಲಿ-

**ವೇಣಕ್ಕ:**— (ಏನೂ ತಿಳಿಯದೆ) ಅಯ್ಯ! ಏನ ಇಷ್ಟೊ, ಏನ ಅನಿಷ್ಟೊ ! ಅವಳೇನು ಗಂಟೇ ಕಟ್ಟಿಟ್ಟ್ಯಾಳೆ ಅನ್ನುವ ಹಾಗ ಮಾತಾಡತೀರಲ್ಲ !

**ಶ್ಯಾಮು:—** (ನಿದ್ರೆಯಿಂದ ಎದ್ದವನಂತೆ ರಭಸದಿಂದ) ಇಂತಹ ಸತ್ಕಾರ್ಯದಲ್ಲಿ ಜನರಿಗೆ ಹೆದರುವದೆಂದರೆ-

**ವೇಣಕ್ಕ:—** ಸುಮ್ಮ ಕೂಡೊ-ನಡುವೆ ಮಾತಾಡಬೇಡ. .ಒಂದು ಗತಿ ಇಲ್ಲದ ಹುಡುಗೆಯು ಸಲುವಾಗಿ ಇಲ್ಲದ ಖಟಾಟೋಪ ಮಾಡಿ ಗೋಳಿಡಿಸಿದರ ಏನು ಸತ್ಕಾರ್ಯೋ ! ಏನ ಬೇಕಾದ್ದು-ಮಾಡಿರಿ -ಇನ್ನು- ಎರಡು ದಿವಸಂತೂ ಆಕೆ ಹೋಗುವ ಹಾಗೇ ಇಲ್ಲ-

**ದೊಡ್ಡರಾಯರು:—** (ತಿರಸ್ಕಾರದ ಸಿಟ್ಟಿನಿಂದ) ಹುಚ್ಚಿ ! ಎರಡು ದಿವಸಗಳೊಳಗೆಯೆ election ಇದೆ-

**ವೇಣಕ್ಕ:—** (ಕೆರಳಿ) ಅದಕೆಯೆ ಆಕೆ ಹೋಗೋದಿಲ್ಲ ಅಂತ ಹೇಳಿದ್ದು ! ನನಗ ಗೊತ್ತಿಲ್ಲೆ ಇವರ ಇಲೆಕ್ಶನ ? ಆ ಗದ್ದಲದೊಳಗೆ ನನ್ನ ಕಡೆಯಿಂದ ಕೆಲಸ ಮಾಡೋದು ಆಗೋದಿಲ್ಲ ತಾಯೀ ! ಅದರೊಳಗಂತೂ ಮೊನ್ನೆ ಅನ್ನದ ತಪ್ಪೇಲಿ-

**ಅಂತಪ್ಪ:—** } (ಒಮ್ಮೆಲೆ) ಅದು ಸುಳ್ಳು, ವೇಣಕ್ಕಾ-ಅದರೊಳಗ
**ತಾತ್ಯಾಚಾರಿ:—** } ಅದು ಹಾಳು ಹರಟೆ-ಅದರೊಳಗ-

**ವೇಣಕ್ಕ:—** (ತಿಳಿಯದೆ ಮತ್ತಿಷ್ಟು ಕೆರಳಿ) ಅಯ್ಯ ! ನಿಮಗೇನು-ಹುಚ್ಚು ಹಿಡೀತು ಅಂತೀನಿ ? ಸುಳ್ಳು ಅಂತೆ ! ಅಲ್ಲ, ಅನ್ನದ ತಪ್ಪೇಲಿ-

**ಅಂತಪ್ಪ:—** } (ಒಮ್ಮೆಲೆ) ಸುಳ್ಳು-ವೇಣಕ್ಕಾ- } (ಒಬ್ಬರೊಬ್ಬರನ್ನೆ ನೋಡಿ ಪೆಚ್ಚಾಗಿ ತಡೆ
**ತಾತ್ಯಾಚಾರಿ:—** } ಲುಚ್ಚೇರ ಹರಟೆ- } ಯುವರು)

**ವೇಣಕ್ಕ:—** (ಚೀರುತ್ತ) ಬಾಯಿ ಮುಚ್ಚತೀರಾ, ಒಂದು ನಿಮಿಷ ! ನನ್ನ ಕಡೆಯಿಂದ ಇಳಿಸೋದಾಗೋದಿಲ್ಲ **ಅನ್ನದ ತಪ್ಪೇಲಿ** ಅಂತ ಹೇಳತೀನಿ-ಸುಳ್ಳು ಅಂತೆ !....ನನಗ ಅಷ್ಟು ತ್ರಾಣ ಇಲ್ಲ....ನಡೀಯೆ, ಯಮುನಾ. ಮನೆಯು ಕಾಳಜಿ ಇದ್ದರೇ ಅಲ್ಲ ಅವರ ಮುಂದೆ ಒದರಿಕೊಳ್ಳೋದು!(ಯಮುನಾನ್ನ ಎಳೆದುಕೊಂಡು ಸಿಟ್ಟಿನಿಂದ ಹೋಗುವಳು).

**ದೊಡ್ಡರಾಯರು:—** (ಏನೂ ತಿಳಿಯದೆ) ಏನದು-ಅನ್ನದ ತಪ್ಪೇಲಿ ?

**ತಾತ್ಯಾಚಾರಿ:—** ಸುಳ್ಳು-ರಾಯರ-(ಅಂತಪ್ಪನು ಅವನನ್ನು ತಡೆಯುವನು)

**ಶ್ಯಾಮು:—** ಪಂಢರಪುರಕ್ಕೆ-(ವಸಂತನು ಅವನನ್ನೂ ತಡೆಯುವನು )

**ದೊಡ್ಡರಾಯರು:**— ( ಇದನ್ನೆಲ್ಲ ನೋಡಿ ಮತ್ತಿಷ್ಟು ತಿಳಿಯದಂತಾಗಿ ಕೇಳಿ ) ಏನದು ? ಜೊಗಳಬಾರದೆ ? ನನ್ನ ಮನೆಯೊಳಗೆಯೆ ನನ್ನಿಂದ ಮುಚ್ಚಿಡುವಂತಹದು—ಛೆ—ಈ ಒಳಗೊಂದು ಹೊರಗೊಂದು ಜನರ್ನ್ನ ನೋಡಿದರೆ ನನಗಂತೂ—ಥೂ! (ಏಳುವನು)

**ವಸಂತ:**— ಅಂ—ರಾಯರ—ಅದು.... (ದೊಡ್ಡರಾಯರು ಆತುರತೆಯಿಂದ ಅವನನ್ನು ದಿಟ್ಟಿಸುವರು.)

(ತೆರೆ)

ಎರಡನೆಯ ಎಳೆ ಹರಿದುದು

## ಮೂರನೆಯ ಎಳೆ

ಮರುದಿವಸ ಮುಂಜಾನೆ ೯ ಗಂಟೆಯ ಸಮಯ. ಮೊದಲನೆಯ ಅಂಕದಲ್ಲಿಯ ಕೋಣೆ, ಅದೇ ವ್ಯವಸ್ಥೆ. ತನ್ನ ಮೇಜಿನ ಹಿಂದೆ ಕೆಲಸ ಮಾಡುವ ಅಂತಪ್ಪ ನಾಗಲಿ ಅವನ ಕಾಗದಗಳಾಗಲಿ ಇಲ್ಲ ಮಾತ್ರ. ಮುಂಜಾವಿನ ಸಮಯವಿದ್ದುದರಿಂದ ಆ ಕಂದೀಲೂ ಇಲ್ಲ. ಇಷ್ಟರಲ್ಲಿ ಎದುರಿನ ಬಾಗಿಲಿನಿಂದ ದೊಡ್ಡರಾಯರು ಬರುವರು. ಒಂದು ಶರ್ಟು, ಒಂದು ಸಾದಾ ದೋತರ, ಬರಿಯ ತಲೆ. ಅಸಮಾಧಾನದಲ್ಲಿರುವರು. ಏನನ್ನೊ ಯೋಚಿಸುತ್ತಿರುವರು. ಕೊನೆಗೆ ನಿರ್ಧಾರ ಮಾಡಿ ಅಡಿಗೆಯ ಮನೆಯ ಬಾಗಿಲಿಗೆ ಬಂದು ನಿಂತು—

**ದೊಡ್ಡರಾಯರು:—** (ಅಧಿಕಾರದಿಂದ) ಏನೆ—ಇನ್ನೊಂದು ಮಾತು. ಈ ಹೊತ್ತು ಸಂಜೆಗೆ ಮನೆಗೆ ಒಂದು ನಾಲ್ಕಾರು ಜನ ಬರುವವರಿದ್ದಾರೆ ....ದಿನದ ಹಾಗೆ ಅಲ್ಲ ಮತ್ತೆ....ಒಂದು ಸಣ್ಣ party ಇದ್ದಹಾಗೆ ಇದೆ....ಆಂ....(ಎಂದು ಕೋಣೆಯ ಮಧ್ಯದಲ್ಲಿ ಬಂದು ನಿಲ್ಲುವರು).

**ವೇಣಕ್ಕ:—** (ತನಗೂ ಮನೆಯಲ್ಲಿ ಅಧಿಕಾರ ಇಲ್ಲವೆ? ಎನ್ನುವಂತೆ ಬಂದು) ನನಗ ಮೊದಲೇ ಗೊತ್ತಿತ್ತು.. .ಮುಂಜಾನೆಯಿಂದ ಮೆತ್ಮೆತ್ತಗ ಮಾತು—ಏನೊ ಗೂಡಾರ್ತ ಇದ್ದಿರಬೇಕು ಅಂತ—(ಗಂಡನು ಸಿಟ್ಟಿನಿಂದ ನೋಡಲು) ಇನ್ನೆಲ್ಲಾ ಕೆಲಸ ನನ್ನೊಬ್ಬಾಕೆಯ ಮ್ಯಾಲೆಯೆ. ತಮ್ಮಂತೆ ಆಗಲಿಲ್ಲಾ ಅಂದರೆ " ಛೆ-ಈ ಹೆಂಗಸರಿದ್ದ ಮನೆಯೊಳಗ ಆಳು, ಅಡಿಗೇಯವರು ಎಷ್ಟು ಚಲೋ ಇದ್ದರೂ ದಕ್ಕೋದೇ ಇಲ್ಲ " ಅನ್ನೋದು. ಈಗ ಅಡಿಗೇಯಾಕೇನ್ನ ಹೊರಗ ಹಾಕಿಸಿದವರು ಯಾರು ? ಗಂಡಸರೊ ? ಹೆಂಗಸರೊ ?

**ದೊಡ್ಡರಾಯರು**:— (ಬೇಜಾರವಾಗಿ) ಎಲೆಲೆ! ಎಷ್ಟು ಮಾತಾಡುವೆಯೆ? ನಾನು ಹೇಳುವದಾದರೂ ಕೇಳುವಿಯೊ ಇಲ್ಲವೊ? ನಿನಗೆ ಮಾಡ ಬೇಕಾದ್ದು ಏನೂ ಇಲ್ಲ ಸಂಜೆಯ partyಗೆ. ಒಂದಿಬ್ಬರನ್ನ ಕರೆಸ ತೀನಿ— ಎಲ್ಲಾ ಶಿಸ್ತಾಗಿ ಮಾಡುವವರನ್ನ. ಅವರೇ ಮಾಡಲಿ ಎಲ್ಲಾ....ನೀನು ಸುಮ್ಮ ಕೂತರೆಯೆ ಸಾಕು.

**ವೇಣಕ್ಕ**:— (ನೊಂದುಕೊಂಡು) ಆಗಲಿ—ಶಿಸ್ತ ಕೆಲಸ ಆಗಬೇಕಾದರೆ ನಾ ಯಾಕೆ ಬೇಕು? ನನ್ನ ಕಡಿಂದ ಒಂದು ಕೆಲಸ ಶಿಸ್ತಾಗಿ ಆಗಿಲ್ಲ ಈ ಮನೆಯೊಳಗೆ?

**ದೊಡ್ಡರಾಯರು**:— ಹಾಗಲ್ಲೆ! ನಿನ್ನ ಶಿಸ್ತು ಬೇರೆ; partyಯ ಶಿಸ್ತು ಬೇರೆ....ಹಂ.... ಮತ್ತೆ ನೀನು ಆಹೊತ್ತಿನ ಹಾಗೆ ಚಹಾ ಹಿತ್ತಾಳೆ ಬೋಗೋಣಿಯೊಳಗ ಹಾಕಿ ಸೋಸಲಿಕ್ಕೆ ಒಂದು ಹರಕು ಪಂಚೆ ಕಳಿಸಿದಿ ಎಂದರೆ—

**ವೇಣಕ್ಕ**:— (ಅಣಕಿಸಿಂದ) ಇಲ್ಲ—ಇನ್ನು ಚಹಾ ಸೋಸಲಿಕ್ಕೆ ಅಂಗಡಿ ಯಿಂದ ಹೊಸ ಹೊಸ ಪಂಚೆ ಕೊಂಡುಕೊಂಡು ಬರ್ರಿ.

**ದೊಡ್ಡರಾಯರು**:— (ಸಿಟ್ಟಿನಿಂದ) ನಿನ್ನ ಶಿಸ್ತು ಅಲ್ಲ ಅಂತ ಹೇಳಲಿಲ್ಲವೆ? ಚಹಾ ಸೋಸಲಿಕ್ಕೆ ಚಂದ ಚಂದ —strainer—ಹಿತ್ತಾಳೆ ಜಾಳಿಗೆ ಅಂತಹವು ಇರತಾವ—ಒಂದು ನಾಲ್ಕ ತಂದು ಕೊಡತೀನಿ....ನೀ ಒಂದರೊಳಗ ಕೈ ಹಾಕಬೇಡ ಅಂತ ಹೇಳಿದೆ—ಇಷ್ಟೆ.

**ವೇಣಕ್ಕ**:— (ದ್ವೇಷದಿಂದ) ಅದನ್ನ ಮುಟ್ಟಿದರ ಕೇಳಿರಿ! ನೀವೇನೊ-ನಿಮ್ಮ ಚಹಾ ಏನೊ!—ಎಲ್ಲಾ ಹಾಳು ಗದ್ಲ ಮುಗಿದು ಮನೆ ತೊಳೆಯೋ ತನಕಾ ಗುಡಿಗಾಗಲಿ ಪುರಾಣಕಾಗಲಿ ಹೋಗಿಬಿಡತೀನಿ!

**ದೊಡ್ಡರಾಯರು**:— (ಬೇಜಾರದಿಂದ) ಛೆ! ಎಂತಹ ಹುಚ್ಚಿ ನೀನು! ನಿನಗೆ ಹೊರಗ ಹೋಗು ಅಂತ ಯಾರು ಹೇಳಿದರು? ಮನೆಗೆ ಮಂದಿ ಬಂದಾಗ ಎಲ್ಲಾರನ್ನೂ ಮೇಲೆ ಕರೆದು, ಆ ಕೆಲಸ ಈ ಕೆಲಸ ನೋಡತಾ ಮನೆಯ ಯಜಮಾನತಿ ಮೆರೆದಾಡತಿರಬೇಕು. (ನಕ್ಕು) ಅದಕ್ಕೆ ಹೇಳಿದೆ ನೀ ಯಾವ ಕೆಲಸ ಮಾಡಬೇಡಾ ಅಂತ! ಅಂ—

**ವೇಣಕ್ಕ:—** (ಅಸಹ್ಯದಿಂದ) ಅಯ್ಯೋ! ಅದಷ್ಟೇ ಉಳಿದಿದೆಯಲ್ಲ ಮುಪ್ಪಿನೊಳಗ ಮಾಡೋದು! ಆಗಲಿ! ಈಗಿನ ಹುಡುಗೇರ ಹಾಗ ಸಿಂಗಾರ ಆಗಿ ಮೆರೀತೀನಿ!....ಹುಂ. ಮೆರೆದಾಡಬೇಕಂತ! ಊರ ಗಂಡಸರೆಲ್ಲಾ ನೆರೆದಾಗ ಹೆಂಗಸರದೇನು ಕೆಲಸೊ?

**ದೊಡ್ಡರಾಯರು:—** (ಅಸಮಾಧಾನದಿಂದ) ಅಲ್ಲೇ—ಅದನ್ನೆಲ್ಲ ಈಗೇನು ಮಾಡೋದು? ಮತ್ತೆಲ್ಲಿಯಾದರೂ ಹೋಗಬೇಡ,ಆಯಿತು....ಮತ್ತೆ ಇದು ನೋಡು, (ಅವಳನ್ನು ದಿಟ್ಟಿಸುವಾಗ ಒಮ್ಮೆಲೆ) ಅಲ್ಲೆ--ನಿನಗ ಇಷ್ಟೂ ಕೂಡ ತಿಳಿಯಬಾರದೆ? ನಾಲ್ಕು ಜನ ದೊಡ್ಡದೊಡ್ಡವರು ಬಂದಾಗ--ಏನೊ ನಾನೂ ತಮ್ಮ ಯೋಗ್ಯತೆಯವ ಅಂತ ಬರತಾರ ನಮ್ಮನೆಗೆ-- ನನ್ನಸಲುವಾಗಿಯಾದರೂ— ಅಲ್ಲ, ಹೊರಗಿನ ನನ್ನ ಯೋಗ್ಯತಾ ಲಕ್ಷ್ಯದೊಳಗೆ ಇಟ್ಟುಕೊಂಡಾದರೂ— ಒಂದಿಷ್ಟು ಮರ್ಯಾದಾದಿಂದ ಬಟ್ಟೆ ಧರಿಸಬಾರದೆ ನೀನು?

**ವೇಣಕ್ಕ:—** (ಬೆಪ್ಪಾದವಳಂತೆ) ಎಂತಹಾ ಮಾತು ಹೇಳಿದಿರs ನನಗ!.... ಹುಂ.... ಮುದುಕಿ ಆದರೂ ನನಗ ಇನ್ನೂ ಮರ್ಯಾದಾದಿಂದ ಇರಲಿಕ್ಕೆಯೆ ಬರೋದಿಲ್ಲ ಅಂತ ಹೇಳತಾರೊ ಏನು?....ಒಂದು ದಿವಸ ಆದರೂ ನನ್ನ ಸೆರಗು ತಲೆಯ ಮ್ಯಾಲೆ ಇಲ್ಲದ್ದನ್ನು ನೋಡಿರುವರೆ ಇವರು?

**ದೊಡ್ಡರಾಯರು:—** (ತಿಳುಹಿಸುವವನಂತೆ) ಅದಲ್ಲೇ ನಾನು ಹೇಳೋದು. ಮಂದಿ ಬಂದಾಗ ಮುಸುಕು ಹಾಕಿದ್ಹಾಗ ಮುಖ ಮುಚ್ಚಿಕೊಂಡು ಸುಳಿದಾಡಬೇಕು ನೀನು ಎಂಬೋ ಹುಚ್ಚು ಹಟ ಇಲ್ಲ ನನಗೆ--

**ವೇಣಕ್ಕ:—** (ಅಸಹ್ಯದಿಂದ) ಸಾಕು ನಿಮ್ಮ ಮಾತು. ನಾ ಅಂದರೆ ಈಗಿನ ಹುಡುಗೇರ ಹಾಗ ಅಂತ ತಿಳಿದಿರಾ ಏನು—ಹೆಗಲಮ್ಯಾಲೆ ಸೆರಗು ತೂಗಹಾಕಿ, ಪಿಳಿಪಿಳಿ ಕಣ್ಣುಬಿಡತಾ ತಿರುಗಲಿಕ್ಕೆ?....ಏನ ತಾಯಿಗಾ ಈಗಿನ ಹುಡುಗೇರಾದರೂ!....ಮೊನ್ನೆ ಕನ್ಯಾ ನೋಡಲಿಕ್ಕೆ ಅಂತ ಬಂದಿದ್ದರು ಆ ಮ್ಯಾಲಿನ ಮನೇ ಕೃಷ್ಣೀನ್ನ. ಆವಾಗಾದರೂ

ತಲೆಯ ಮ್ಯಾಲೆ ಸೆರಗು ಹಾಕಿಕೊಳ್ಳಬೇಕು!--ಮರ್ಯಾದಾ ಅಂದರ ಕೇಳೋಬ್ಯಾಡರಿ ಈಗಿನ ಹುಡುಗೇರಿಗೆ!

**ದೊಡ್ಡರಾಯರು:**—(ಮಾತು ತಪ್ಪಿಸುವ ಬಗೆಯಿಂದ) ಬಂದವರೇನು ಇಲಕಲ್ಲ ಸೀರೆಯ ಸೆರಗು-ಅಂಚು ನೋಡಿಕೊಂಡು ವ್ಯಾಪಾರ ಮಾಡಲಿಕ್ಕೆ ಬಂದಿದ್ದರೊ, ಏನು ಹುಡುಗೆಯನ್ನ ನೋಡಲಿಕ್ಕೆ ಬಂದಿದ್ದರೊ?

**ವೇಣಕ್ಕ:**— (ಹಟದಿಂದ) ಆಯ್ತು—ನನಗೂ ಹಾಗೆಯೆ ಮಾಡು ಅಂತೀರೇನು ಈಗ—?

**ದೊಡ್ಡರಾಯರು:**— (ತಾನೂ ಹಟದಿಂದ) ಅದಲ್ಲೇ—ನಾನು ಹೇಳೋದು. ನಾಲ್ಕ ಜನ ಬಂದಾಗ ನೀನು ಒಂದು ಸರಿಯಾದ ಸೀರೆ ಕೂಡ ಸುತ್ತಿಕೊಳ್ಳೋದಿಲ್ಲ-ಅದಕ್ಕೆ—

**ವೇಣಕ್ಕ:**— (ಅಡ್ಡಮಾತನಾಡಿ) ಬಂದವರ ದಶಿಂದ ಹೊಸ-ಹೊಸ ಸೀರೆ ಉಟ್ಟಕೋಬೇಕು ಅಂತೀರಾ? ನಾಳೆ ಅಷ್ಟು ವೈಭವ ಬಂದಿತೂ ಅಂದರೆ--

**ದೊಡ್ಡರಾಯರು:**— (ಸಿಟ್ಟಿನಿಂದ) ಹೊಸ ಸೀರೇನೇ ಬೇಕು ಅಂತ ಯಾರು ಹೇಳಿದರು ನಿನಗ ಈಗ? ನಾನು—ನನ್ನ ಮಾತು ಆದರೂ ಪೂರ್ತಿ ಕೇಳುವೆಯೊ ಇಲ್ಲವೊ?–ಒಂದು ಹಳೆಯ ಸೀರೆಯನ್ನೆ ಉಟ್ಟುಕೊಂಡರೂ ಸಾಕಾಗೇದ. ಈಗ ನೋಡು ಎಂತಹಾದು ಉಟ್ಟಿರುವೆ!.... ಮಂದಿ ಬಂದರೂ ಅಂತ ಗೊತ್ತಾದರೆ ಸಾಕು–ಹೆಚ್ಚಿನ ಸಂಬಳ ಬೇಡಬೇಕು ಅನ್ನುವವರ ಹಾಗೆ ಇದ್ದ ಹರಕು ಬಟ್ಟೆಯೆಲ್ಲಾ ಸುತ್ತಿಕೊಳ್ಳುವೆ....ಒಂದು ಹರಕ ಮಡಿಸೀರೆ ಅನ್ನುವಿ; ಒಂದೊಂದು ಸಲ ಅಂತೂ ಒಂದು ಹಳೆಯ ದೋತರ ಸುತ್ತಿಕೊಂಡು ಬಿಡುವೆ!

**ವೇಣಕ್ಕ:**— (ತಡೆಯುತ್ತ) ನಿಮ್ಮ ಮಾತ ಕೇಳತಾ ಕೂತರೆ–ಚಂದ ಕಾಣಿಸ ತದೆ ಅಂತ ಮನೆಯ ದೇವರನ್ನು ಮಾರ್ಕೆಟಿನೊಳಗ ಇಡಬೇಕಾದೀತು!

**ದೊಡ್ಡರಾಯರು:**— (ಸಮಯ ಸಿಕ್ಕಿತೆಂಬ ರಭಸದಿಂದ) ಓಹೊ! ಮುದುಕೆ ಆದೆ ಅಂತ ಹೇಳಿಕೊಂಡರೂ ಚಂದ ಕಾಣಿಸತೀನಿ ಅಂಬೊ ಜಂಬ ಬಿಟ್ಟಿಲ್ಲ!

**ವೇಣಕ್ಕ:—** (ಕಣ್ಣೀರು ತಡೆದು) ಈ ಮನೆಯೊಳಗೆ ನಾನು ಎಂದಾದರೂ ಚಂದ ಕಾಣಿಸಿದ್ದು ಅಷ್ಟರೊಳಗೆಯೆ ಆದ....ಆದರೂ–ಕಸ–ಮುಸುರೆ, ಮಡಿ–ಮೈಲಿಗೆ ಏನಾದರೂ ವಿಚಾರ ಬೇಕೋ ಬ್ಯಾಡೊ ?

**ದೊಡ್ಡರಾಯರು:—** (ಅಸಮಾಧಾನದಿಂದ) ಅಲ್ಲೇ–ಅದಕ್ಕೆ ದೋತರ ಯಾಕೆ ಸುತ್ತಿಕೊಳ್ಳಬೇಕು ?

**ವೇಣಕ್ಕ:—** (ಕೆರಳಿ) ಯಾರಾರೊ ಬಂದು ನೆರದಿರತಾರ–ಅಲ್ಲೆ ಇಲ್ಲೆ ಹಾಯ್ದು ಹೋಗುವಾಗ ತಾಕುವದು, ತಟ್ಟುವದು—ಇದನ್ನೆಲ್ಲಾ ಹೇಳಬೇಕೆ ?

**ದೊಡ್ಡರಾಯರು:—**(ನಿರಾಶಿತರಾಗಿ) ನಿನ್ನ ಮುಂದೆ ಇನ್ನು ತಲೆ ಒಡೆದು ಕೊಂಡರೆ ಸೈ—

**ವೇಣಕ್ಕ:—**(ದ್ವೇಷದಿಂದ) ನಿಮಗ ಯಾಕೆ ಅಷ್ಟು ತ್ರಾಸ ? ಹೇಳಲಿಲ್ಲೆ ನಾನೇ ಹೋಗಿಬಿಡತೀನಿ ಹೊರಗೆ ಅಂತ. ಬೇಕಾದವರನ್ನ ನೆರೆಸಿರಿ ನಿಮ್ಮ ಮನೆಯೊಳಗೆ. ನಾನೇ ನಿಮಗ ಅಷ್ಟು ಕಾಲ್ತೊಡಕು ಆಗಿದ್ದರ ಹೋಗಿ ಬಿಡತೀನಿ ಎಲ್ಲಿಯಾದರೂ ಹಾಳಾಗಿ. (ಕಣ್ಣೀರು ತಂದು) ನನ್ನ ತಾಯಿ ಆದರೂ ಇದ್ದರೆ ತವರ–ಮನೆಗೆಯೆ ಹೋಗಿಬಿಡತಿದ್ದೆ— ಪುಣ್ಯಾತ್ಮಳು–ಎಲ್ಲಾ ನೀಗಿ ಸಂತೋಷದಿಂದ ಮುತ್ತೈದೆತನದೊಳಗ ಹೋಗಿಬಿಟ್ಟಳು........ನನಗೂ ಹಾಗೆಯೆ ಕಣ್ಣು ಮುಚ್ಚಿಬಿಡಬಾರದ ದೇವರು ?....ಹುಂ....ಸತ್ತ ಮ್ಯಾಲೆ—ಬೇಕಾದರ—ಒಂದು ಪೀತಾಂಬರ ಉಡಿಸಿ ನಡುಮನೆಯೊಳಗೆ ಕೂಡಿಸಿಬಿಡಿರಿ....ಮುಂದೆ ಏನಾದ ಭಾಗ್ಯ ಅಷ್ಟರೊಳಗೆಯೆ ಆದೆ.

**ದೊಡ್ಡರಾಯರು:—** (ಬೆಪ್ಪಾಗಿ, ಬಾಯಾರಿ, ನಿರುಪಾಯನಾಗಿ, ನಿರಾಶಿತನಾಗಿ) ಎಲೆಲೆ–ಛಿ !–ಥೂ !....ಅಲ್ಲ—ನೀ ಸಾಯಬೇಕು ಅಂತ ಯಾರಂದರು ?

**ವೇಣಕ್ಕ:—** (ಬಿಕ್ಕುತ್ತ) ಇಂಥಾಪರಿಯಿಂದ ಇರೋದಕಿಂತ ಸಾಯೋದೇ ನೆಟ್ಟಗ.

**ದೊಡ್ಡರಾಯರು:—** (ಸಮಾಧಾನಗೊಳಿಸುವ ನಿರ್ಧಾರದಿಂದ) ಅಲ್ಲೇ— ನನ್ನ ಮಾತು ಕೇಳದೆ ನಿನ್ನಷ್ಟಕ್ಕೆ ನೀನೇ ಸುಮ್ಮಸುಮ್ಮನೆ ಮನಸ್ಸಿಗೆ

ಹಚ್ಚಿಕೊಂಡು ಮಾತನಾಡುವೆ. ನಿನಗೆ ಒಂದು ದಿವಸ ಆದರೂ ಇದು ಬೇಡ, ಇದು ಬೇಕು ಅಂದಿರುವೆನೆ? ನಾನೆಲ್ಲ ಇಷ್ಟು ಹೊರಗಿನ ಕೆಲಸ ಮಾಡೋದು ಯಾಕೆ? ಎರಡು ಹೊತ್ತು ಊಟ, ಎಂಟು ತಾಸು ನಿದ್ದೆ ಆದರೆ ನನಗೆ ಸಮಾಧಾನ. . ನನ್ನೊಬ್ಬನ ಸಮಾಧಾನಕ್ಕೆಯೆ ದುಡಿಯುತ್ತಿದ್ದರೆ ಇಷ್ಟೆಲ್ಲ ಯಾಕೆ ಮಾಡುತ್ತಿದ್ದೆ ?....ನನ್ನ ಹೆಂಡತಿ, ನನ್ನ ಮಕ್ಕಳು, ನನ್ನಂತಹನ ಮನೆಯವರು ಅಂತ ನಿಮಗೆಲ್ಲಾ ಅಭಿಮಾನ ಹುಟ್ಟಲಿ ಅಂತ—

**ವೇಣಕ್ಕ:**— (ಕಣ್ಣು ಒರೆಸಿಕೊಳುತ್ತ) ನಿಮಗೆ ಯಾರೇನು ಅಂದರು ಈಗ ?

**ದೊಡ್ಡರಾಯರು:**— ಅಂದಿರುವೆ ಎಂದಲ್ಲ—ನಿಮ್ಮ ಸಲುವಾಗಿ ಇಷ್ಟು ನಾನು ಕಷ್ಟಬಡುವಾಗ ನನ್ನ ಸಮಾಧಾನಕ್ಕೆ—ಅದೂ ಒಂದು ದಿವಸದ ಪೂರ್ತಿಗೆ ಇಷ್ಟು ನೀನು ವಿರೋಧ ಕಟ್ಟಬೇಕು ಅಂದರೆ—

**ವೇಣಕ್ಕ:**— (ಚಕಿತಳಾಗಿ ಮುಖವೆತ್ತಿ ನೋಡಿ) ವಿರೋಧ-ಯಾರು-ಕಟ್ಟಿದರು ?

**ದೊಡ್ಡರಾಯರು**— (ಸಮಾಧಾನದಿಂದ) ವಿರೋಧ ಅಂದರೆ ಕಟ್ಟಿಗೆ ಹಿಡಿದುಕೊಂಡು ಕಡಿದಾಡಬೇಕು ಅಂತಲ್ಲ. ನಾಲ್ಕು ಜನ ಹೊರಗಿನಿಂದ ಬಂದಾಗ ಸಂತೋಷ—ಉಪಚಾರ ಮಾಡಲಿಲ್ಲ ಅಂದರ—

**ವೇಣಕ್ಕ:**— (ನೋಲಿನಂತೆಯೆ) ಈಗ ನಾ ಬೇಡ ಅಂದೆನೆ ?

**ದೊಡ್ಡರಾಯರು:**—(ಹತಾಶನಂತೆ)ಇದಕ್ಕೂ ಹೆಚ್ಚಿಗೆ ಏನನ್ನಬೇಕು—ನೀನೇ ನೋಡು-ಆಂ ! ಮನೆ ಬಿಟ್ಟು ಹೋಗತೀನಿ—ಅಂದೆ; ಸಾಯ್ತೀನಿ—ಅಂದೆ.

**ವೇಣಕ್ಕ:**— (ನೊಂದುಕೊಂಡುದನ್ನು ತೋರಿಸಬಾರದೆಂದು) ಅಹುದು – ಇಂಥಾ ಪರಿಯಿಂದ ಇರೋದಕಿಂತ ಅಂತ ಹೇಳಿದೆ—

**ದೊಡ್ಡರಾಯರು**.—(ದೊಡ್ಡ ಮನಸ್ಸಿನ ಔದಾಸೀನ್ಯದಿಂದ) ನನಗೇನು ಇಷ್ಟ ಇದೆ ಎಂದು ತಿಳಿದಿರುವೆಯಾ ಹೀಗೆ ಇರೋದು ? ಮುಂದಿನ ವರ್ಷದೊಳಗೆ ಇದನ್ನೆಲ್ಲಾ ಬಿಟ್ಟು ಕೊಡುವೆ. ಸಾಕು ಈ ಮುನಿಸಿಪಾಲ್ಟಿ—ಈ ಊರ—ಜಗಳ—ಈ ದಡ್ಡ ಜನರ ಸಹವಾಸ ! ಮುಂದಿನ ಸಲ council ಗೆ ನಿಂತು ಬಿಡುವೆ. ಏನೆ, ಆಂ ! ಆ ಮೇಲೆ ಮುಂಬಯಿ

ಇಲ್ಲವೆ ಪುಣೆ!—ಈ ಹಾಳು ಕರ್ನಾಟಕ ಮಾತ್ರ ಬೇರೆ ಪ್ರಾಂತ ಆಗ ಬಾರದು – ಇಷ್ಟೆ ಬೇಡಿಕೊಳ್ಳುವೆ. ಒಂದು ವರ್ಷ ಆದರೆ ಬಹಳ ಆಯಿತು—ಒಂದೆರಡು committee ಗಳ ಮೆಂಬರು; ಮರುವರ್ಷವೆ ಯಾವದಾದರೊಂದು ಖಾತೆಯ ಮಿನಿಸ್ಟರ!....ಆ ಮೇಲೆ ಎಲ್ಲಿ ನೋಡಿದಲ್ಲಿ ಪಾರ್ಟಿ! ನಾನೂ ನೀನೂ ಗವ್ಹರ್ನಮೆಂಟ ಹಾಉಸ್‌ದ ಪಾರ್ಟಿಗೆ ಎಷ್ಟೋ ಸಲ ಹೋಗಬೇಕಾದೀತು—ಆ ಕಾಲಕ್ಕೆ ನೀನು ಮಡಿಸೀರೆ ಇಲ್ಲ ದೋತರ ಸುತ್ತಿಕೊಂಡರೆ ಹೇಗೆ ನಡೆದೀತು ಹೇಳು.

**ವೇಣಕ್ಕ:—** (ಏನೂ ತಿಳಿಯದೆ) ಏನಂತೀರೊ ಏನೊ! ನನಗಂತೂ ಈ ಬಣ ಉಸಾಬರಿ ಬಿಟ್ಟು ನಮ್ಮಷ್ಟಕ್ಕ ನಾವು "ರಾಮಾ, ಕೃಷ್ಣಾ" ಅಂತ ಕಾಲ ಕಳೆಯಬಾರದೆ—ಅನ್ನಿಸತದ.

**ದೊಡ್ಡರಾಯರು:—** (ನಗೆಯಿಂದ) ರಾಮಾ-ಕೃಷ್ಣಾನ ಕಾಲವೇ ಕಳೆದು ಹೋಗಿದೆಯೆ, ಹುಚ್ಚೀ. ಅದಿರಲಿ—ಈ ಹೊತ್ತಿನಿಂದ ನೀನು ರೂಢಿ ಮಾಡಿಕೊ party ಗೆ ಹೋಗೋದು! ನಿನಗೆ ಎಂತಹದು ಬೇಕು ಅಂತಹದು-ಮುಂದಿಬಾಯಿಗೆ ನೀರು ಬಿಡಿಸುವಂತಹದು——ಸೀರೆ ಕೊಂಡುಕೊಳ್ಳುವೆಯಂತೆ.

**ವೇಣಕ್ಕ:—** ನಿಮ್ಮ ಜೋಡಿ ಇನ್ನು ಊರತುಂಬ ಚಹಾ-ಪಾರ್ಟಿಗೆಯೆ ಹೋಗಬೇಕಾದರ—ನನಗನ್ನಿಸತದ ನಿಮ್ಮ ಜೋಡಿ ನನಗೂ ವರ್ಷಕ್ಕ ಒಂದು ೮-೧೦ ದೋತರಾನೇ ಕೊಂಡುಬಿಡಿರಿ ಅಂತ! ಏನ ಪಾರ್ಟೀನೊ, ಏನು ಚಹಾನೊ-! ತಮ್ಮಷ್ಟಕ್ಕ ತಾವು ಯಾಕ ಇರ ಬಾರದು ಅಂತೀನಿ ನಾನು.

**ದೊಡ್ಡರಾಯರು:—** (ನಕ್ಕು) ನಿನ್ನಷ್ಟಕ್ಕ ನೀನಿರೋದು ಸಹನ ಆಗೋ ದಿಲ್ಲ ಎರಡನೆಯವರಿಗೆ! ನೋಡಬಾರದೆ? ನನಗೆಲ್ಲಿ ಬೇಕಾಗಿದೆ ಈ ಹಾಳು election?

**ವೇಣಕ್ಕ:—** (ಹಿರಿತನದಿಂದ) ನಾನು ಮೊದಲಿನಿಂದಲೇ ಹೇಳಿದೆ—ಈ ಗದ್ದಲ ದೊಳಗ ಬೀಳಬ್ಯಾಡರಿ ಅಂತ. .ಮನೆಯ ಹೆಂಗಸಿನ ಮಾತು ಅಂತ ಮನಸ್ಸಿನ ಮ್ಯಾಲೆ ಹಾಕಿಕೊಳ್ಳಲಿಲ್ಲ.

**ದೊಡ್ಡರಾಯರು:—** (ಮಾತು ತಪ್ಪಿಸುವ ಹವಣಿಕೆಯಿಂದ) ಇರಲಿ ಬಿಡೆ ! ನಿನ್ನ ಮಾತು ಕೇಳ್ತಾ ಕೇಳ್ತಾ ನಾನು ಹೇಳ್ಬೇಕೆಂದಿರೋ ಮಾತೇ ಮರೆತು ಹೋಗಿತ್ತು. ಹಂ....ಇದು ನೋಡು....ನನಗ ಸದ್ಯಕ್ಕೆ ಕೆಲಸ ಇದೆ–ಈ ಕೋಣೆಯೊಳಗ ಇರುವೆ–ನನ್ನ ಚಹಾ ಅಲ್ಲಿಯೇ ಕಳುಹಿಸಿ ಬಿಡು–ಇದು ನೋಡು–ಒಳಗಿಂದೊಳಗಿನ ಬಾಗಿಲಿನಿಂದಲೇ ಕಳುಹಿಸಿ ಬಿಡು.

**ವೇಣಕ್ಕ:—** (ನಗೆಯಿಂದ) ಇದೇನು ಈ ಹೊತ್ತು ಧರ್ಮ ಒಂತು–ವೈದಿಕ ಬ್ರಾಹ್ಮಣರ ಹಾಗೆ ಮುಚ್ಚಿ ಮುಚ್ಚಿ ಚಹಾ ಕುಡಿಯಬೇಕಂತೀರಿ ?

**ದೊಡ್ಡರಾಯರು:—** (ಹೊರಗೆ ಸಪ್ಪಳಾದುದನ್ನು ಕೇಳಿ) ಬಂದನೊ ಏನೊ–ಮಹಾರಾಯ ! ಮುಚ್ಚಿ ಮುಚ್ಚಿ–ಅಲ್ಲೇ....ಆ ಮುಸಲ್ಮಾನ ಬರುವವ ಇದ್ದಾನ–ಅವನ ಕೂಡ ಹೇಗೆ ಕೂತು ಕುಡಿಯಬೇಕೂ ಅಂತ ....(ಅಧೈರ್ಯದಿಂದ) ಮತ್ತೆ ಇದು ನೋಡು–ನಾನು ಒಳಗೆ ಚಹಾ ಕುಡಿಯುವಾಗ ಆತ ಬಂದಾ ಅಂದರ–ಆ ಈತ–ನಬೀಸಾಹೇಬ–ಆತ ಬಂದಾ ಅಂದರ ಒಂದು ಕಪ್ಪು ಚಹಾ ಅವನಿಗೂ ಕಳುಹಿಸಿ ಕೊಟ್ಟು ಬಿಡು....ಆಂ....ನನಗ ಕೆಲಸ ಇದೆ (ಎದುರಿನ ಕೋಣೆಯಲ್ಲಿ ಹೋಗುವನು.)

**ವೇಣಕ್ಕ:—** ( ಬೆಪ್ಪಾಗಿ ) ಏನು ?....ಹುಂ....ಎಲ್ಲಿ ಕೂಡಿಸಲಿ ಆತನ್ನ–ಅಡಿಗೆಯ ಮನೆಯೊಳಗೊ ದೇವರ ಮನೆಯೊಳಗೊ ? ಏನ ಕಲಿಕಾಲ ಬಂದಿತು ಅಂತೀನಿ–ನಮ್ಮ ಮನೆಗೆ (ಒಳಕ್ಕೆ ಹೊರಡುವಳು)

**ವಸಂತ:—** (ಹೊರಗಿನಿಂದ ಬಂದು) ನನ್ನ ಕರೆದರೇನು–ವೇಣಕ್ಕಾ ?

**ವೇಣಕ್ಕ:—** (ತಿರುಗಿ ನಿಂತು) ಯಾರು ? ವಸಂತ ಏನು ?....ಯಾರನ್ನೂ ಕರೇಲಿಲ್ಲ.

**ವಸಂತ:—** ಅಲ್ಲ, ಕಲಿಕಾಲ ಬಂದಿತು ಅಂದಿರಿ–(ಅವಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿ) ಯಾಕೆ, ವೇಣಕ್ಕಾ, ಮತ್ತೇನಾಯಿತೇನು ? ದೊಡ್ಡರಾಯರು ಸಿಟ್ಟಿಗೆ ಬಂದರೇನು?....ಆಂ....ಯಮುನಾ ಇನ್ನೂ ಮನೆಯೊಳಗೆಯೆ ಇದ್ದಾಳೇನು ?

**ವೇಣಕ್ಕ:**— ಆಕೆ ಮಧ್ಯಾಹ್ನಕ ಹೋಗುವಾಕೆ-ಆದರೂ ಅಡಿಗೆ ಆದೇನೂ ಮಾಡಬಾರದಂತೆ....

**ವಸಂತ:**—ನಾನು ಯಮುನಾನ ಸಲುವಾಗಿಯೇ ಓಡತೋಡತಾ ಬಂದೆ. (ವೇಣಕ್ಕನು ಸಂಶಯದಿಂದ ತನ್ನನ್ನು ನೋಡಲು) ಮೊನ್ನೆ ಸಿಂಬೆಹಣ್ಣು ಕೊಯ್ಯುವಾಗ ನನ್ನ ಚಾಕು ತೆಗೆದುಕೊಂಡಿದ್ದಳು-ಅದನ್ನು ಕಟ್ಟಿ ಕೊಂಡೇ ಊರಿಗೆ ಹೋದಳೇನೊ ಅಂತ ಹೆದರಿದೆ-ನನಗೀಗ ಬರೆಯ ಬೇಕಾಗಿದೆ ಆದರೆ ಪೆನ್ಸಿಲ್ ಕೆತ್ತಲಿಕ್ಕೆ ಚಾಕು ಇಲ್ಲ.

**ವೇಣಕ್ಕ:**— ಹೇಳ್ತೇನಿ ಆಕೆಗೆ ತಂದು ಕೊಡು ಅಂತ....ಅಲ್ಲ- ವಸಂತಾ- ಈಗ ಯಾವನೊ ಒಬ್ಬ ಮುಸಲ್ಮಾನ ಬರೋವ ಅಂತ-ಅವನಿಗೆ ಚಹಾ ಕೊಡು ಅಂತ ಹೇಳಿದರು ನೋಡೊ ನನಗ! ಅಲ್ಲ-ಹೆಂಗಸಿಗೆ ಏನಾದರೂ ಮಾನ-ಮರ್ಯಾದೆ ಅದನೊ ಇಲ್ಲೊ?....ನನಗಂತೂ (ಗದ್ಗದಳಾಗಿ) ಚಾಕು ತಕ್ಕೊಂಡು ಕುತ್ತಿಗೆ ಕೊಯ್ಯುಕೊಳ್ಳೋ ಹಾಂಗ—

**ವಸಂತ:**— (ಕನಿಕರ ತೋರಿಸಿ) ಛೆ-ಛೆ-ಇದೇನು, ವೇಣಕ್ಕಾ? ಮುಸಲ್ಮಾ ನಗ ಚಹಾ ಕೊಡೋದೇನು ದೊಡ್ಡ ಕೆಲಸ ಅಂತೀರಿ? ಯಮು ನಾನ ಕಡೆಯಿಂದ ಕಳುಹಿಸಿ ಬಿಡಿರಿ-ಇಲ್ಲಾ ಅಂದರ ಹೀಗ ಮಾಡಿರಿ; ಮುಸಲ್ಮಾನರ ಪದ್ಧತಿ ಎಲ್ಲ ನಮ್ಮ ವಿಪರೀತ—ಅವರು ನಮ್ಮ ಹಾಗ ಚಹಾ ಕುಡಿಯೋದಿಲ್ಲ-ಕಪ್ಪು ಬೋರಲು ಮಾಡಿ-ಅದರ ಮೇಲೆ ಬಸಿ ಡಬ್ಬು ಹಾಕಿ-ಚಹಾ ಕುಡೀ—

**ವೇಣಕ್ಕ:**— (ನಕ್ಕು) ಅಯ್ಯ! ನಿನಗಂತೂ ಕಡೆತನಕ ಬುದ್ಧಿ ಬರೋದಿಲ್ಲ ನೋಡು....(ಎದುರು ನೋಡಿ)ಅಕೊ-ಶ್ಯಾಮು ಬಂದ-ಅವಸರ ಮಾಡುವ -ಹೋಗ್ತೇನಿ ಇನ್ನು ಒಳಗಿನ ಕೆಲಸಕ್ಕೆ. (ಹೋಗುವಳು)

ವಸಂತನು ಆದರಯುಕ್ತದೃಷ್ಟಿಯಿಂದ ನೋಡುತ್ತಿರುವನು. ಇಷ್ಟರಲ್ಲಿ ಹೆದರಿದವ ನಂತೆ ಶ್ಯಾಮನು-ಹೊರಬಾಗಿಲಿಗೆ ಬರುವನು. ಬಗಲಲ್ಲಿ ಕಾಗದದಲ್ಲಿ ಸುತ್ತಿದ ಒಂದು ಗಂಟು. ಚಪ್ಪಾಳೆ ತಟ್ಟುವನು. ವಸಂತನು ಅವನ ಕಡೆಗೆ ಮುಖತಿರುವಿ ಹೆದರಿದ ಆತನ ಮುಖಮುದ್ರೆಯನ್ನು ನೋಡಿ ಚಕಿತನಾಗುವನು. ಯಾರೂ ಇಲ್ಲ

ವೆಂದು ಮನವರಿಕೆ ಮಾಡಿಕೊಂಡು, ಬಾಗಿಲನ್ನು ಮುಚ್ಚಿ ಶ್ಯಾಮನು ಒಳಗೆ ಬರುವನು.

**ವಸಂತ:**— ಯಾಕೊ? ಎಷ್ಟು ಹೆದರಿದ್ದು—

**ಶ್ಯಾಮು:**— ಶಶ್....ಮೆಲ್ಲಗೆ ಮಾತಾಡು.

**ವಸಂತ:**— ಆ ಗಂಟಿನಲ್ಲಿ ಏನಿದೆ?

**ಶ್ಯಾಮು:**— ಸೀರೆ.

**ವಸಂತ:**— (ಮುಗುಳ್ನಗೆಯಿಂದ) ಓಹೊ! ವೇಷ ಬದಲಾಯಿಸಿ ಓಡಿ ಹೋಗಬೇಕೂ ಅನ್ನುವೆಯಾ?

**ಶ್ಯಾಮು:**— (ಸಿಟ್ಟು ಬಂದರೂ ಮೆಲುದನಿಯಲ್ಲಿಯೆ) ನನಗಲ್ಲೊ ಸೀರೆ—ಆಕೆಗೆ-

**ವಸಂತ:**— ಆಕೆ....? ಯಮುನಾ ಆಕೆ ಆದಳೆ ಇಷ್ಟರಲ್ಲಿ? (ಒಮ್ಮೆಲೆ ತಿಳಿದವನಂತೆ) ಅಲ್ಲೊ, ಸೀರೆ ಆಕೆಗಾದರೆ, ಹೆದರಿಕೆ ನಿನಗೆ ಯಾಕೊ?

**ಶ್ಯಾಮು:**— ನಿನ್ನೆ ರಾತ್ರಿ ನೀಹೋದ ಮೇಲೆ—ಯಾರಿಗೂ ಹೇಳುವ ಧೈರ್ಯವಾಗಲಿಲ್ಲ—ಇನ್ನೂ ಯಾರಿಗೂ ಗೊತ್ತಿಲ್ಲ—ಅದಕ್ಕ—

**ವಸಂತ:**— ಅದಿರಲಿ—ಮೊದಲು ಸೀರೆ ನೋಡೋಣ—ಹೇಳುವ ಹಾಗಿದ್ದರೆ ಆ ಮೇಲೆ—(ಶ್ಯಾಮನು ಮೂಲೆಯ ಕಾಗದವನ್ನು ಹರಿದು ತೋರಿಸುವನು ಒಮ್ಮೆಲೆ ನಿರಾಶಿತನಾದವನಂತೆ) ಅಯ್ಯೊ—

**ಶ್ಯಾಮು:**— (ಒಮ್ಮೆಲೆ) ಒದರಬೇಡೊ—

**ವಸಂತ:**— (ನಕ್ಕು) ಹೆದರಬೇಡೊ....ನಿಮ್ಮ ತಾಯಿ ಒಳಗೆ ಕೆಲಸಕ್ಕ ಕೂತಾರ. ದೊಡ್ಡರಾಯರು list ನೋಡಿ vote ಎಣಿಸತಾರ.... ಅಲ್ಲೊ—ಶ್ಯಾಮಾ— ಎಂಥಾ ಸಮಾಜಸುಧಾರಕನೊ ನೀನು? ಇಂಥಾ ಸೀರೆ ತರಬೇಕೆ?

**ಶ್ಯಾಮು:**— (ಸಂಶಯದಿಂದ) ಯಾಕೆ? ಎಂತಹಾದ್ದು ಬೇಕಾಗಿತ್ತು?

**ವಸಂತ:**— ಎಂತಹಾದ್ದು? ಇದನ್ನ ಹೇಳಬೇಕೆ? ಪುನರ್ವಿವಾಹ—ಅಂದರೆ ಕೆಂಪುಸೀರೇನೆ ಬೇಕು—ಕೆಂಪು.

**ಶ್ಯಾಮು:—** (ಒಮ್ಮೆಲೆ ಕೋಪಾತಿಶಯದಿಂದ) ತಡೆಯೊ ನಿನ್ನ ಹೇಸಿ ನಾಲಗೆ ಯನ್ನು—

**ವಸಂತ:—** (ಸಮಾಧಾನ ತೋರಿಸುತ್ತ) ಹಾಂ—ಹಾಂ—ಸಿಟ್ಟಿಗೇಳಬೇಡ........ ಶ್ಯಾಮೂ, ಇನ್ನು ತಡೆಯುವದು ಶಕ್ಯವಿಲ್ಲ. ಒಂದಿನಿಂದಲೂ ತುಂಬಿ ತುಳಿಕಿ ಉಕ್ಕಿ ಉಬ್ಬಿ ಪುಟಿಯುತ್ತಿರುವ ಸ್ಫೂರ್ತಿಕಾರಂಜಿಯನ್ನು ಇನ್ನು ತಡೆಯುವದು ಶಕ್ಯವಿಲ್ಲ......ಕೆಂಪುಸೀರೆ ಅಂದರೆ ನಿನಗೆ ಇಷ್ಟೊಂದು ಅಶುಭ—ಅಸಹ್ಯ ಎನ್ನಿಸಿತಲ್ಲವೆ? ಆದರೆ, ಶ್ಯಾಮೂ, ಆರ್ಯಸಮಾಜದಲ್ಲಿ ಕೆಂಪುಸೀರೆಯೆಂದರೆ ಎಂದಿನಿಂದಲೂ ಸ್ತ್ರೀಯರಿಗೆ ಪಾತಿವ್ರತ್ಯದ ಪತಾಕೆಯಂತಿದೆ, ಸ್ವಾತಂತ್ರ್ಯದ ನಿಶಾನೆಯಾಗಿದೆ, ಮರೆಯಬೇಡ. ಅದಕ್ಕಾಗಿಯೆ ಹಿಂದೂಧರ್ಮದ ಪುನರುತ್ಥಾಪನೆ ಯನ್ನು ಮಾಡುವ ಶಿವಾಜಿಗೆ ಕೆಂಪುಬಣ್ಣದ ಭಗವಾ ಝೇಂಡಾ ನಿಲ್ಲಿಸಬೇಕಾಯಿತು....(ತನ್ನಷ್ಟಕ್ಕೆ ಮಾತನಾಡುವವನಂತೆ) ಕೆಂಪು! ಕೆಂಪು! ಕೆಂಪುಬಣ್ಣವೆಂದರೆ ಜಾಗೃತಿಯನ್ನು ಜನಿಸುವ ಬಣ್ಣ, ಕ್ರಾಂತಿಯನ್ನು ಕೂಗುವ ಬಣ್ಣ, ಸ್ವಾತಂತ್ರ್ಯವನ್ನು ಸಾರುವ ಬಣ್ಣ. ನಿದ್ದೆಹೋದ ಜಗತ್ತನ್ನು ಜಾಗೃತಗೊಳಿಸಿ ಜನ—ಜೀವಿಗಳನ್ನು ಹುರಿದುಂಬಿಸುವ ಸೂರ್ಯ ಕೆಂಪು. ಪೂರ್ವಪಶ್ಚಿಮಖಂಡಗಳನ್ನು ಒಂದಕ್ಕೊಂದು ಕೂಡಿಸಿ ವಿಶ್ವದ ವ್ಯವಹಾರ—ಸಂಬಂಧಗಳಲ್ಲಿ ಕ್ರಾಂತಿಯಾದದ್ದು **ಕೆಂಪು** ಸಮುದ್ರದಿಂದ....ಬಡವರಿಗೂ ಬಲ್ಲಿದರಿಗೂ, ಹುಡುಗರಿಗೂ— ಹೆಂಗಸರಿಗೂ, ಗಾವಿಳರಿಗೂ—ಗಂಡಸಿಗೂ, ಹಿರಿಯರಿಗೂ—ಹುಚ್ಚರಿಗೂ ಸಕಲರಿಗೂ ಸಮನಾದ ಸ್ವಾತಂತ್ರ್ಯ ಎಂದು ಸಾರುವ ರಶಿಯಾದ ಪತಾಕೆಯ ಬಣ್ಣ ಕೆಂಪು....ನಮ್ಮದೇಶವನ್ನು ನೋಡು....ನಿಮಿಷಕ್ಕೆ ಸಾವಿರುವೈಲುಗಳ ವೇಗದಿಂದ ಓಡುವ ಪೃಥ್ವಿಯಲ್ಲಿಯೆ ನೆಲೆಸಿದ್ದರೂ ನಮ್ಮದೇಶ, ನಮ್ಮ ಸಮಾಜ ಹಾಗೆಯೆ ನಿಂತಿದೆ—ಯಾಕೆ? ಸಾವಿರಾರು ನಮ್ಮ ಸ್ತ್ರೀಯರು ಕೆಂಪುಸೀರೆಯ ನಿಶಾನೆಯನ್ನು ಅಡ್ಡ ಹಿಡಿದಿರು ವದರಿಂದಲ್ಲವೆ?........ಸಮಾಜಕ್ಕೆ ಗಂಡಸು ಬಲಗಣ್ಣು, ಹೆಂಗಸು ಎಡಗಣ್ಣು ಎಂದು ಮಿಕ್ಕವರು ಹೇಳಿದರೆ—ನಮ್ಮ ಸಮಾಜದಲ್ಲಿ

ಶಿವನ ಮೂರನೆಯ ಉರಿಗಣ್ಣಿನಂತೆ ನಿಂತಿದೆ ಈ ಕೆಂಪುಸೀರೆಯು ಸಮೂಹ........ಶ್ಯಾಮಾ, ಶ್ಯಾಮಾ, ಇತಿಹಾಸದಲ್ಲಿ ಕಲಿತಿಲ್ಲವೆ? ನಿಯಮಿತತನ, ಕರ್ತವ್ಯದಕ್ಷತೆ, ಪ್ರಗತಿ, ಸ್ವಾತಂತ್ರ್ಯ ಇವು ಬ್ರಿಟಿಶ ಸಾಮ್ರಾಜ್ಯದ ಹೆಗ್ಗುರುತುಗಳೆಂದು ನೀನು ಓದಿಲ್ಲವೆ? ಪೃಥ್ವಿಯ ಬಹುಭಾಗವನ್ನು ಆಕ್ರಮಿಸಿದ ಆ ಬ್ರಿಟಿಶ ಸಾಮ್ರಾಜ್ಯವು ನಕಾಶೆಯಲ್ಲಿ ಕೆಂಪು; ಅದರಂತೆಯೆ ಮನೆಮನೆಯಲ್ಲಿ ನಿಯಮಿತತನ, ಕರ್ತವ್ಯದಕ್ಷತೆ, ಪ್ರಗತಿ ಸ್ವಾತಂತ್ರ್ಯ ಇವುಗಳನ್ನು ನೆಲೆಗೊಳಿಸುವ, ಮೂರ್ತಿಮತ್ತಾಗಿ ನಿಲ್ಲಿಸುವ ನಮ್ಮ ಸಮಾಜ–ಸಾಮ್ರಾಜ್ಯ–ವೈಭವ ಕೆಂಪುಸೀರೆಯಿಂದಲೆ. ಇಂತಹ ಕೆಂಪುಸೀರೆ ನಿನಗೆ ಅಶುಭ ಎನ್ನಿಸಿತೆ, ಅಸಹ್ಯ ಎನ್ನಿಸಿತೆ? ನನಗಂತೂ––ಪುನರ್ವಿವಾಹದ ನನ್ನ ಸಾಮಾಜಿಕ ನಾಟಕಗಳಲ್ಲಿಯ ಎಲ್ಲ ಪರದೆಗಳು ಕೆಂಪು–ಅಚ್ಚ ಕೆಂಪು–ಒರೆಯಸಬೇಕೆಂದು ಆಕಾಂಕ್ಷೆಯಿದೆ. (ಶ್ಯಾಮನು ತನ್ನನ್ನು ದುರದುರು ನೋಡುವುದನ್ನು ಕಂಡು) ಯಾಕೆ? ಇದನ್ನು ಕೇಳಿ ನಿನ್ನ ಕಣ್ಣುಗಳೂ ಕೆಂಪಾದುವಲ್ಲವೆ?

**ಶ್ಯಾಮು:**— (ಕ್ರಮವಾಗಿ ಮುಗುಳ್ನಗೆಯನ್ನು ಸೂಚಿಸುತ್ತ) ಅಲ್ಲೊ–ನಿನ್ನ ಸಾಮಾಜಿಕ ನಾಟಕಗಳಲ್ಲಿ–ಹೀಗೆಯೆ ಅಸಂಬದ್ಧ ಹರಟೆ ಕೊಚ್ಚುವೆಯಾ?

**ವಸಂತ:**— (ನೊಂದುಕೊಂಡವನಂತೆ) ಹೇಗೆ ನಮ್ಮ ಸಮಾಜ, ಹಾಗೆ ನನ್ನ ನಾಟಕ. ಆ ಅಸಂಬದ್ಧ ಹರಟೆ ಈಗೇಕೆ? ಹೇಳು, ಸದ್ಯಕ್ಕೆ ನನ್ನ ವಿಚಾರ ನಿನಗೆ ಸರಿಬಂದಿತೊ ಇಲ್ಲೊ? ಈ ಮದಿವೆಯಿಂದ ಸಮಾಜದಲ್ಲಿ ಕ್ರಾಂತಿ ಆಗಬೇಕಾಗಿದೆಯೊ ಇಲ್ಲೊ?

**ಶ್ಯಾಮು:**— (ಹಟದಿಂದ) ಅಹುದೊ––ಎಷ್ಟುಸಲ ಹೇಳಬೇಕು ಅದನ್ನೆ? ಆದರೂ ವಸಂತಾ, ಪಂಢರಪುರಕ್ಕೆ ಹೋಗೋದು ಸರಿಯಲ್ಲ ಅಂತ ನನಗ ವಿಚಾರ ತೋಚಿದೆ ನೋಡು.

**ವಸಂತ:**— ಇದೇನೊ? ಹೀಗೆ ಹಿಂಜರಿಯುವಿಯಾ?

**ಶ್ಯಾಮು:**— (ಬೇಜಾರವಾಗಿ) ಹಿಂಜರಿಯುವದಲ್ಲೊ!––ಒಂದುವೇಳೆ ನಾವು ಹೆದರಿದೆವು ಅಂತೇ ಅಷ್ಟು ದೂರ ಹೋದೆವೂ ಅಂತ ಜನರು ಆಡಿ

ಕೊಳ್ಳಬಹುದು.... ಇದಲ್ಲದೆ—ಇನ್ನೊಂದು........ಇಂಥಾ ಸಮಾಜ ಸುಧಾರಣೆಯ ಕೆಲಸ ಕನ್ನಡಿಗರಾದ ನಾವು ಮಹಾರಾಷ್ಟ್ರದೊಳಗೆ ಹೋಗಿ ಯಾಕೆ ಮಾಡಬೇಕು—ಹೇಳು ನೋಡೋಣ.

**ವಸಂತ:**— ಯಾಕೇನು ? ಕರ್ನಾಟಕದೊಳಗ ಮಾಡಬೇಕಾದ ಕೆಲಸ ಮೊದಲು ಮಹಾರಾಷ್ಟ್ರದೊಳಗ ಮಾಡಿದರೇನೇ ಕನ್ನಡಿಗರಿಗೆ ಅದರ ಎಚ್ಚರ, ಅಭಿಮಾನ ಹುಟ್ಟುವವು.

**ಶ್ಯಾಮ:**— (ಅಸಮಾಧಾನದಿಂದ) ಆದರೂ ಇನ್ನೂ ಒಂದು ಹೆದರಿಕೆ ನನಗೆ.... ನನಗ ಮರಾಠೀ ಬರೋದಿಲ್ಲ, ಯಮುನಾಗೂ ಮರಾಠೀ ಬರೋದಿಲ್ಲ; ಆಡುವ ಮಾತು ಕೂಡ ತಿಳಿಯದಲ್ಲಿ ಮದಿವೆ ಮಾಡಿಕೊಳ್ಳೋದು ಹೇಗೆ ಹೇಳು ನೋಡುವಾ?

**ವಸಂತ:**— (ನಕ್ಕು) ಆಡುವ ಮಾತು ತಿಳಿಯದಲ್ಲಿ ಅಂತ! ಅಲ್ಲೋ, ಅದನ್ನು ಮಾತಾಡುವವರಿಗೆ ಕೂಡ ತಿಳಿಯದಂತಹ ಸಂಸ್ಕೃತಭಾಷೆಯ ಮಂತ್ರ ಒದರುವಾಗ ಮದಿವೆ ಮಾಡಿಕೊಳ್ಳುವರು—ಇದೇನು ಹೊಸ ತೊಡಕು ಅಂತ ಹೇಳುವೆ !

**ಶ್ಯಾಮ:**— (ತಡೆಯದೆ) ತೊಡಕು ಹೊಸದು ಅಲ್ಲೋ- ಮದಿವೆ ಹೊಸದು; ಅದಕ್ಕೇ ಹೇಳ್ತೇನಿ....ಪಂಢರಪುರಕ್ಕಂತೂ ಹೋಗುವ ಹಾಗಿಲ್ಲ—

**ವಸಂತ:**— (ನಡುವೆಯೆ) ತಾಳೀಕೋಟೆಗೆ ಹೋಗುವೆಯೇನು ?

**ಶ್ಯಾಮ:**— (ಸಿಟ್ಟಿನಿಂದ) ಯಾವದಾದರೊಂದು ಕ್ಷೇತ್ರಸ್ಥಳ ಬೇಕೋ— ನನಗಲ್ಲ, ಆಕೆಗೆ ಸಮಾಧಾನ.

**ವಸಂತ:**— (ಬೆರಗಾದವನಂತೆ) ತಾಳೀಕೋಟಿ ಕ್ಷೇತ್ರ ಅಲ್ಲ? ಪ್ಲೇಗು, ಕಾಲರಾದ ಪಿಡುಗಿನಿಂದ ಜನರು ಸತ್ತುಹೋದರೇನೇ ಕ್ಷೇತ್ರ, ಕಾಳಗ ಅಂತ ಕಡಿದಾಡಿ ಸತ್ತರ ಕ್ಷೇತ್ರ ಅಲ್ಲ ಅಂತ—

**ಶ್ಯಾಮ:**— (ಸಿಟ್ಟಿನಿಂದಲೆ) ಸಾಕ್ಮಾಡೊ ನಿನ್ನ ಅಸಂಬದ್ಧ ಹರಟೆ! ಎಂತಹ ಸಮಯ—ಎಂತಹ ಮಾತುಗಳನ್ನಾಡುವಿ? ನಿನಗೆ ಎಳ್ಳಷ್ಟಾದರೂ ಆಶೆ, ಆಕಾಂಕ್ಷೆ, ಅಭಿಮಾನ ಇಲ್ಲವೆ? ಈ ವಿವಾಹವೆಂದರೆ ಸಮಾಜ

ಸುಧಾರಣೆಯಲ್ಲಿ ಮೊದಲನೆಯ ಹೆಜ್ಜೆ; ಈ ವಿವಾಹವೆಂದರೆ ಹಳೆಯ ಹಾಳು ರೂಢಿಯ ಧೂಮಪತಾಕೆ; ಈ ವಿವಾಹ ಎಂದರೆ ಸ್ತ್ರೀಸ್ವಾತಂತ್ರ್ಯದ ತಳಹದಿ; ಈ ವಿವಾಹ ಎಂದರೆ–ಬುದ್ಧಿಯ ಬೆಳಕು. ಇಂತಹ ಒಂದೂ ವಿಚಾರವು ನಿನಗೆ ಹೊಳೆಯುವದಿಲ್ಲವೆ ?

**ವಸಂತ.**— (ವಿಚಾರಿಸಿದವನಂತೆ) ಹಾಗಾದರೆ ಹೀಗೆ ಮಾಡು. ರೂಢಿಯ ವಿರುದ್ಧವಾದ ಮದಿವೆ ಇದ್ದರೆ ಒಂದು native stateಗೆ ಹೋಗಿ ಬಿಡು. ಉಳಿದ ಕ್ಷೇತ್ರದೊಳಗ ಬರಿಯ ಮುಹೂರ್ತ ತಪ್ಪಿಸಿ ಮದಿವೆ ಮಾಡಿಕೊಳ್ಳತಿದ್ದರ ಈ ಸಂಸ್ಥಾನಗಳೊಳಗೆ ಕಾಯಿದೆ ಕೂಡಾ ತಪ್ಪಿಸಿ ಮದಿವೆ ಮಾಡಿಕೊಳ್ಳಲಿಕ್ಕೆ ಬರೋದು. (ಒಮ್ಮೆಲೆ ಯೋಚನೆ ಹೊಳೆದವನಂತೆ) ಆಹಾ ! ಸಂಸ್ಥಾನ ಅಂದರೆ ಸಂಸ್ಥಾನ, ಕರ್ನಾಟಕ ಅಂದರೆ ಕರ್ನಾಟಕ. ಮೈಸೂರಿಗೆ ಹೋಗಿ ಬಿಡೋ, ಜಾಣಾ. ಮತ್ತೆ–ಹುಡುಗಗೆ ಎಷ್ಟು ವರ್ಷ ಅಂತ ಯಾರಾದರೂ ಕೇಳಿದರೆ ಹನ್ನೆರಡೇ ಅಂತ ಹೇಳು....ಯಾಕೆಂದರೆ— ಅವರ ಸಾಹಿತ್ಯದಲ್ಲಿ ಕೂಡಾ ಹನ್ನೆರಡು ವರ್ಷ ಮೀರಿ ಮದಿವೆ ಆಗೋದಿಲ್ಲ–ಅಂತೂ ನೋಡಿದೆಯಿಲ್ಲೊ ಕೊನೆಗೆ–ನೀ ತಂದ ಸೀರೆ ನಿರುಪಯೋಗದ್ದೇ ಆಯ್ತು— (ಒಳಗೆ ಸಪ್ಪಳಾದುದನ್ನು ನೋಡಿ) ಹಂ–ಮುಚ್ಚು ಮುಚ್ಚು ಆ ಸೀರೆಯನ್ನು–ಯಮುನಾ ಬಂದಳು. (ಹೊರಡುವನು).

**ಶ್ಯಾಮ:**— (ಒಮ್ಮೆಲೆ ಬೆದರಿ) ನೀ ಎಲ್ಲಿಗೆ ಹೊರಟಿಯೊ ?

**ವಸಂತ:**— ದೊಡ್ಡರಾಯರ ಕಡೆ ಕೆಲಸ ಇದೆ.

**ಶ್ಯಾಮ:**— (ದೈನ್ಯದಿಂದ)ಆಕೆ ಬಂದುಹೋದ ಮೇಲೆ ನಿನ್ನ ಕೆಲಸ ಮಾಡುವೆಯಂತೆ....ತಡೆಯೊ.

**ವಸಂತ:**— (ನಗೆಯಿಂದ) 'ಆಕೆ' ಇಲ್ಲಿ ಇರುವಾಗ ದೊಡ್ಡರಾಯರು ಇಲ್ಲಿ ಬರಲಾರದ ಹಾಗ ನೋಡಿಕೊಳ್ಳೋದೇ ನನ್ನ ಕೆಲಸ. (ಎಂದು ಎದುರಿನ ಕೋಣೆಗೆ ಹೊರಡುವಷ್ಟರಲ್ಲಿ ಯಮುನಾ ಒಳಗಿನಿಂದ ಬರುವಳು. ವಸಂತನು ಎದುರಿನ ಬಾಗಿಲಿನಲ್ಲಿಯೆ ತಡೆಯುವನು).

**ಯಮುನಾ:**— (ವಸಂತನಿಗೆ) ಚಾಕು ಎಲ್ಲಿಯದು ಅಂದಿರಿ !

**ವಸಂತ:**— ಛೆ-ನನಗಲ್ಲ-ಅದೇನೊ ಗಂಟು ಕಟ್ಟಿಕೊಂಡು ಸೀರೆ ತಂದಾನ ಶ್ಯಾಮು-ಅವನಿಗೆ ಬೇಕಾಗೇದ ಚಾಕು, ಗಂಟು ಬಿಚ್ಚಲಿಕ್ಕೆ (ಎಂದು ಒಮ್ಮೆಲೆ ಎದುರಿನ ಕೋಣೆಯೊಳಗೆ ಹೋಗುವನು. ಯಮುನಾ ಏನೂ ತಿಳಿಯದೆ ಶ್ಯಾಮುನ ಕಡೆ ನೋಡುವಳು; ಅದ್ದರಿಂದ ಶ್ಯಾಮುನಿಗೂ ಏನೂ ತಿಳಿಯದಂತಾಗಿ ಅವನು ಎರಡನೆಯ ಕಡೆಗೆ ನೋಡಬೇಕೆಂದು ಪ್ರಯತ್ನಪಡುವನು; ಇದನ್ನು ನೋಡಿ ಯಮುನಾನೂ ಬೇರೊಂದು ಕಡೆ ನೋಡುತ್ತ ನಿಲ್ಲುವಳು; ಆ ಮೇಲೆ ಶ್ಯಾಮುನು ಮೆಲ್ಲನೆ ಅವಳ ಕಡೆ ಕಣ್ಣು ತಿರುಗಿಸುವನು; ಇಷ್ಟರಲ್ಲಿ ಅವಳೂ ಅವನ ಕಡೆ ಕಣ್ಣು ತಿರುಗಿಸಿ ನೋಡುವಳು; ಆದುದರಿಂದ—

**ಶ್ಯಾಮು:**— (ಮಾತಾಡಬೇಕೊ ಮಾತಾಡಬಾರದೊ ಎಂದು ನಿಶ್ಚಯವಾಗದ ಮುನ್ನ) ಅಂ....ನನಗಲ್ಲ....ಸೀರೆ. .ಅಲ್ಲಲ್ಲ . .ಅಂದರ....ಚಾಕು.... ನನಗಲ್ಲ.... ಸೀರೆ....ತಂದೀನಿ ಆಯ್ತು....ಹೀಗೇ... ಅಂಗಡಿಗೆ . . ಹೋಗಿದ್ದೆ.... ಅದಕ್ಕೆ....

**ಯಮುನಾ:**— ವೇಣಕ್ಕಾ ಅವರು ಮಡಿಯೊಳಗ ಇದ್ದಾರ....ಅವರಿಗೆ ತೋರಿಸಬೇಕಾಗೇದೇನು ?

**ಶ್ಯಾಮು:**— (ನಗುವ ಯತ್ನದಿಂದ) ನೀನು ನೋಡಿದರೂ ನಡೀತದ. .ಅಂದರ . . ಅಲ್ಲ. .ನಿನಗೆಯೆ ಅಂತ ತಂದದ್ದು. .ವಸಂತ ಹೇಳಿದ. .ಅದಕ್ಕ . .

**ಯಮುನಾ:**— (ಚಕಿತಳಾಗಿ) ನನಗೆಯೆ ? ವಸಂತರಾಯರು ಹೇಳಿದರೆ ?. .

**ಶ್ಯಾಮು:**— (ಪೆಚ್ಚಾಗಿ) ಅಲ್ಲಲ್ಲ. .ನಾನೇ ಹೇಳಿದೆ ಅವನಿಗೆ. .ನಿನಗ ಅಂತ ನನಗ ಹೇಳು ಅಂತ....ಅಂದರ "ನಾ ತಂದೀನಿ" ಅಂತ ಮನೆಯವರಿಗೆ ಹೇಳು ಅಂತ. ."ನಾ" ಅಂದರ ಅವನೆ. .ಒಟ್ಟು-ನಾ ತಂದೀನಿ ಅಂತ ಮನೆಯವರಿಗೆ ತಿಳಿಯಬಾರದು ಅಂತ-ಊರಿಗೆ ಹೋಗೋದು— ಅದಕ್ಕ—

**ಯಮುನಾ:**— (ಸಂಶಯದಿಂದ) ಊರಿಗೆ ?. .ಊರಿಗೆ ಯಾರು ಹೋಗುವವರಿದ್ದಾರ ?

**ಶ್ಯಾಮು:**— (ಸುಳ್ಳು ನಗೆಯಿಂದ) ಊರಿಗೆ ಅಂದರ ಪಂಢರಪುರಕ್ಕೆ ಅಂತ.

**ಯಮುನಾ:—** (ಅತ್ತಿತ್ತ ನೋಡಿ) ನನಗ ಸುಮ್ಮ ಹಾಂಗ ಹೇಳು ಅಂತ ಹೇಳಿದ್ದರು. . ನಾನು ಪಂಢರಪುರಕ್ಕ ಹೋಗೋದಿಲ್ಲ—

**ಶ್ಯಾಮ:—** (ಸ್ವಲ್ಪ ಧೈರ್ಯದಿಂದ) ಅದೇ-ಅದೇ-ನಾನೂ ಅದನ್ನೆ ಹೇಳತಿದ್ದೆ ವಸಂತನಿಗೆ–ಪಂಢರಪುರಕ್ಕ ಹೋಗೋದರೊಳಗ ಏನೂ ಅರ್ಥ ಇಲ್ಲಾ ಅಂತ. . ಅದಕ್ಕೆ ಮೈಸೂರಿಗೆ ಹೋಗಿ ಬಿಡೋಣಾ-ಆಯಿತ್ತು.

**ಯಮುನಾ:—** (ಏನೂ ತಿಳಿಯದೆ) ಅಲ್ಲ–ಒಂದೆರಡು ದಿವಸ ಇಲ್ಲೇ ತಮ್ಮ ಮನೆಯೊಳಗಯೆ ಇರಬೇಕು ಯಾರಿಗೂ ತಿಳಿಯದ್ಹಾಂಗ ಅಂತ–ನನಗ ವಸಂತರಾಯರು ಹೇಳಿದರ—

**ಶ್ಯಾಮ:—** (ಬೆದರಿ) ತನ್ನ ಮನೆಯೊಳಗೆ ?.... ಮತ್ತೆ ನನಗ ಮೈಸೂರಿಗೆ ಹೋಗರಿ ಅಂತ ಹೇಳಿದನಲ್ಲ— !

**ಯಮುನಾ:—** ಮೈಸೂರೊಳಗ ಅವರ ಕೆಲಸ ಏನದೊ ನನಗ ಗೊತ್ತಿಲ್ಲ.. ನನ್ನಷ್ಟಕ್ಕಂತೂ ತಮ್ಮ ಮನೆಯೊಳಗೆಯೆ -ಏನೊ ಮದಿವೆ ಅದೆ ಅಂತ —

**ಶ್ಯಾಮ:—** (ಉದ್ವೇಗದಿಂದ) ಯ –ಯಮುನಾ, ಮೈಸೂರಿನ ಕೆಲಸ–ತನ್ನ ಮನೆಯ ಕೆಲಸ ಎರಡೂ ಒಂದೇ. ನಿನಗ ಹೇಳಿದ್ದೂ ನನಗ ಹೇಳಿದ್ದೂ ಎರಡೂ ಒಂದೇ. ನಿನ್ನ ಕೆಲಸ ನನ್ನ ಕೆಲಸ ಎರಡೂ ಒಂದೇ. ಆತ ನಿನಗೆ ಹೇಳಿದ್ದೂ ನಾ ಆತನಿಗೆ ಹೇಳಿದ್ದೂ ಎರಡೂ ಒಂದೇ... .... ಯಮುನಾ, ಯಮುನಾ, ಅದಕ್ಕೆಂದೇ ಈ ಸೀರಿ ನಿನಗಾಗಿ ತಂದದ್ದು. ಯಮುನಾ, ನಮ್ಮಿಬ್ಬರ ಮದಿವೆ ಆಗಬೇಕೂ ಅಂತ ಆತ ನಿನಗೆ ಹೇಳಿದ್ದು ನಾನೇ ಆತನಿಗೆ ಮೊದಲು ಹೇಳಿದ್ದೆ. ಆತ ಹೇಳಿದ ನಿನ್ನ ಮದಿವೆ, ನಾ ಹೇಳೋ ನನ್ನ ಮದುವೆ ಎರಡೂ ಒಂದೇ – (ಎಂದು ಅವಳ ಸಮೀಪಕ್ಕೆ ನಡೆದು ಬರುವನು)

**ಯಮುನಾ:—** ( ಹೆದರಿ) ನನ್ನ ....? .... ನಾನು-ನಾನು–ಅವ್ವಯ್ಯಾ ! .... ನಾನು ಏನು ಇದ್ದೀನಿ ಗೊತ್ತಿಲ್ಲೆ ನಿಮಗೆ ?

**ಶ್ಯಾಮ:—** (ಆವೇಶ ತಾಳಿ) ನನಗೆ ಗೊತ್ತಿಲ್ಲವೆ . ನೀನು ಏನು ಇರುವೆ ಯೆಂಬುದು?ಸಮಾಜಸುಧಾರಣೆಯ ಆಧಾರಸ್ತಂಭ ನೀನು;ಸಮಾಜದ

ಕಟ್ಟಡವನ್ನು ಭದ್ರವಾಗಿ ನಿಲ್ಲಿಸುವ ಮೂಲೆಕಲ್ಲು, ನೀನು; ಸಮಾಜಕ್ಕೆ ಪ್ರಗತಿಯ ಮಾರ್ಗವನ್ನು ತೋರಿಸುವ – ತೋರಿಸುವ – (ಉಗುಳು ನುಂಗಿ) – ಇದಲ್ಲದೆ ನನ್ನ ಪ್ರೇಮ ನಿನ್ನಲ್ಲಿ. (ಎಂದು ಕೈ ಹಿಡಿಯುವನು)

**ಯಮುನಾ:—** (ಕೈಕೊಸರಿಕೊಳ್ಳುತ್ತ) ಅಪ್ಪಯ್ಯಾ – ನನ್ನ ಕೈ ಹಿಡಿಯಬೇಡಿರಿ—

**ಶ್ಯಾಮು:—** (ಅಭಿಮಾನೋದ್ರೇಕದಿಂದ) ಹೆದರ ಬೇಡ, ಯಮುನಾ; ನೀನು ಯಾವ ಸ್ಥಿತಿಯವಳಿದ್ದರೂ, ಯಾವ ಜಾತಿಯವಳಿದ್ದರೂ ನಿನ್ನನ್ನು ಧೈರ್ಯದಿಂದ, ಅಭಿಮಾನದಿಂದ ಮುಟ್ಟುವೆ

**ಯಮುನಾ:—** ಅದಲ್ಲ, ಹಿಟ್ಟು ಚಾಳಿಸಿ ಹೊಲಸ ಆಗೇದ ನನ್ನ ಕೈ. (ಶ್ಯಾಮನು ಕೈ ಬಿಡುವನು). ಅಯ್ಯಯ್ಯ – ನನಗೇನೇನೊ ಹೇಳಿದರು ವಸಂತರಾಯರು. (ಒನ್ಮೆಲೆ) ಬೇಡ ಬೇಡ, ನನಗ ಮದಿವೀನೇ ಬೇಡ.... ಒಮ್ಮೆ ಮದಿವೆ ಆಗಿ ಬಂದ ಈ ದುಃಸ್ಥಿತಿ ಸಾಕಾಗಿದೆ – ಬೇಡ (ಎಂದು ಒನ್ಮೆಲೆ ಒಳಗೆ ಹೋಗುವಳು)

**ಶ್ಯಾಮು:—** (ಅವಳನ್ನು ತಡೆಯಬೇಕೆಂಬ ಪ್ರಯತ್ನವು ವ್ಯರ್ಥವಾಗಲು) ಯಮುನಾ, ನಾನು ಜೀವದಿಂದಿರುವವರೆಗೆ ನಿನಗಿನ್ನೊಮ್ಮೆ ಅಂತಹ ದುಃಸ್ಥಿತಿ ಬರಗೊಡಲಿಕ್ಕಿಲ್ಲ – ಯಮುನಾ—

**ವಸಂತ:—** (ಒನ್ಮೆಲೆ ಬಂದು) – ಗೋದಾವರೀ ನರ್ಮದಾ ಕಾವೇರೀ—

**ಶ್ಯಾಮು:—** (ಒನ್ಮೆಲೆ ತಿರುಗಿ ನಿಂತು ಸಿಟ್ಟಿನಿಂದ) ಸಾಕುಮಾಡು ನಿನ್ನ ಹುಚ್ಚತನವನ್ನು!

**ವಸಂತ:—**(ಆಶ್ಚರ್ಯ ತೋರಿಸಿ) ಸಿಟ್ಟಿಗೆ ಯಾಕೆ ಏಳುವೆಯೊ? ನಿಮ್ಮ ಮದಿವೆಗೆ ಯಾವ ಬ್ರಾಹ್ಮಣನೂ ಬರೋದಿಲ್ಲ. ಅದಕ್ಕೆ ನಾನೇ ಮಂತ್ರ ಪಾಠಮಾಡಿ rehearsal ಮಾಡಬೇಕೆಂದರೆ—

**ಶ್ಯಾಮು:—** (ಕೆರಳಿ) ಹಾಳಾಯಿತು, ನಿನ್ನ ನಾಟಕ, ನಿನ್ನ rehearsal! ಮಿಕ್ಕವರಂತೆ ನಿನ್ನ ಮಿತ್ರರನ್ನೂ ಅಪಹಾಸಕ್ಕೆ ಈಡುಮಾಡುವ ನಿನ್ನ ಮೂರ್ಖತನಕ್ಕೆ ಧಿಕ್ಕಾರವಿರಲಿ! ನನ್ನ ಪ್ರೇಮಮಂದಿರವನ್ನು

ಕೆಡಹಿ, ನನ್ನ ಸಮಾಜಸೇವೆಯನ್ನು ಮಣ್ಣುಗೂಡಿಸಿ, ವಸಂತಾ, ನೀನು ಮೂರ್ಖ – ಶತಮೂರ್ಖ ಎಂದು ತೋರಿಸಿಕೊಟ್ಟೆ! ಇನ್ನೆಲ್ಲಿಯ ಮದುವೆ?

**ವಸಂತ:—** (ಅವನನ್ನು ಬಿಟ್ಟುಸುತ್ತ) ಶ್ಯಾಮಾ, ನನಗೆ ಮನಬಂದಂತೆ ಬಯ್ಯುವಿಯಂತೆ, ಆದರೆ ನನ್ನ ನಾಟಕಕ್ಕೆ ಬಯ್ಯಬೇಡ, ತಿಳಿಯಿತೆ? ಯಾಕೆಂದರೆ, ನಾನು ಇಂದಿಲ್ಲ ನಾಳೆ ಸತ್ತು ಹೋಗುವೆ, ಆದರೆ ನನ್ನ ನಾಟಕಗಳು ಚಿರಸ್ಥಾಯಿ! (ಒಮ್ಮೆಲೆ ಸಿಟ್ಟು ತೋರಿಸುತ್ತ) ಅಲ್ಲೋ— ನನಗೆಷ್ಟು ತ್ರಾಸವಾಗಿದೆ ಕಲ್ಪನೆ ಇದೆಯೆ ನಿನಗೆ? ಒಂದು ಕಡೆ, ರಾಯರು ಹೊರಗೆ ಬಾರದಂತೆ ನೋಡಬೇಕು; ಇನ್ನೊಂದು ಕಡೆ, ನಿನ್ನ ಮತ್ತು ಯಮುನಾನ ಮಾತು ಕೇಳಬೇಕು. (ಶ್ಯಾಮನು ಮಾತ್ರನಾಡಬೇಕೆನ್ನಲು) ತಡೆಯೊ....ನಿಮ್ಮಿಬ್ಬರ ಮಾತು ನಾನು ಕೇಳಿದೆ. ಯಮುನಾ ಒಪ್ಪಿದ್ದು ಕೇಳಿಯಂತೂ ನನಗೆ ಹಿಡಿಸದಷ್ಟು ಸಂತೋಷ-

**ಶ್ಯಾಮ:—** (ತಿರಸ್ಕಾರದಿಂದ) ಒಪ್ಪಿದಳಂತೆ—! ಮುಳ್ಳೊಂದು ನೊಟ್ಟೊಂದು ಹೇಳುವ ನಿನ್ನ ನಾಚಿಕೆಗೇಡಿತನಕ್ಕೆ ಸಮಯ, ನೀಮಾ ಇಲ್ಲವೆ?.... 'ಒಲ್ಲೆ, ಒಲ್ಲೆ' ಎಂದಳು.

**ವಸಂತ:—** (ಅತ್ಯಂತ ಸಮಾಧಾನದಿಂದ) ಅಯ್ಯೋ, ನಿನ್ನನ್ನು ನೋಡಿ ನನಗೆ ಕನಿಕರ ಬರುವದು! ಎಲೊ – ಹೊಟ್ಟೆಬಟ್ಟೆಗಿಲ್ಲದ ತಿರುಕನಂತೆ, ಸಮಾಜದಲ್ಲಿ ಸೌಖ್ಯವಿಲ್ಲದೆ, ಸಂಸಾರದಲ್ಲಿ ಪ್ರೇಮದ ಸುಖವಿಲ್ಲದೆ ಹಂಬಲಿಸಿ ಕಂಗಾಲಾಗಿ, ಶೃಂಗಾರಕ್ಕೆ ಕನಕರಿಸಿ ಕನಸು ಕಾಣುವ ಕೂಸಿನ ಕಲ್ಪನೆಯವರ ನಾಟಕಗಳನ್ನು ನೋಡಿ ಅದರಂತೆಯೆ ವ್ಯವಹಾರ ಎಂದು ತಿಳಿಯದಿರುವಿಯಾ? ಒಲ್ಲೆನ್ನುವಾಗ ಅವಳ ದನಿಯಲ್ಲಿಯ ನಡುಕು, ಅವಳ ಕಣ್ಣಲ್ಲಿಯ ನೀರು ನೋಡಲಿಲ್ಲವೆ ನೀನು? ಒಲ್ಲೆನ್ನುವಾಗಲೆ ಒಪ್ಪಿದಳೆಂದು ಮಾನಸಶಾಸ್ತ್ರದ ಆಧಾರದಿಂದ ನಿನಗೆ ಸಿದ್ಧ ಮಾಡಿ ತೋರಿಸುವೆ ಆ ಮೇಲೆ–ಆದರೆ ಸದ್ಯಕ್ಕೆ ಹೊತ್ತು ಕಳೆಯಬೇಡ—

**ಶ್ಯಾಮ:—** (ಆಶೆಯ ಮೊಳಕೆಯೊಡೆದು) ಒ–ಪ್ಪಿ–ದ–ಳೆ?

**ವಸಂತ:—** (ಅವಸರ ಮಾಡುವವನಂತೆ) ಅಹುದೊ— ಎಷ್ಟು ಸಲ ಹೇಳಲಿ ? ಮದಿವೆ ಇದೇ ಊರಿನಲ್ಲಿ—ಮುಹೂರ್ತ ನಾಡದಿನ ದಿವಸ-ಆಮೊತ್ತು election—

**ಶ್ಯಾಮು:—** (ಆನಂದಾತಿರೇಕದಿಂದ) ಓಹೊ ! ಸುಖದ ಸುಗ್ಗಿ.

**ವಸಂತ:—** ತಡೆಯೊ—ಆ ದಿನವನ್ನ ಹರಿಜನವಾರ ಎಂದು ಪಾಲಿಸ ಬೇಕೆಂದು ನಿನ್ನ ತಂದೆಯವರು ಒಪ್ಪಿದರೆ ಮಾತ್ರ—ಈ ಮದಿವೆ—

**ಶ್ಯಾಮು:—** ಒಪ್ಪಿದರೆ ಅಂತೆ ! ಈಗಿಂದೀಗ ಇದರ ವ್ಯವಸ್ಥೆ ಮಾಡುವೆ. ನೋಡು, ವಸಂತಾ, ನಾನು ತಂದೆಯನ್ನು ಮುಹೂರ್ತಕ್ಕೆ ಒಪ್ಪಿ ಸುವೆ, ನೀನು ಯಮುನಾನ್ನ ಮದಿವೆಗೆ ಒಪ್ಪಿಸಬೇಕು—ನೋಡು— (ಎಂದು ಎದುರಿನ ಕೋಣೆಯ ಕಡೆಗೆ ನಡೆಯುವನು)

**ವಸಂತ:—** (ಒಮ್ಮೆಲೆ ಅವನನ್ನು ತಡೆದು ಹಿಡಿದೆಳೆದು ಹಿಂದೆ ತಂದು) ಹಾಂ — ಈಗ ರಾಯರು ಆ ಸಬೀನಾಬನ ಹಾದೀ ನೋಡತಾ ಕೂತಾರ. ಹಸಿದ ಹಾರುವ, ಉಂಡ ಮುಸಲ್ಮಾನ ಒಬ್ಬರೊಬ್ಬರಿಗೆ ಬೆಟ್ಟಿಯಾಗುವ ವಿಶ್ವಾಮಿತ್ರ ಮುಹೂರ್ತ ಇದು. ಕಾರಣ-ನೀನು ಅಡಿಗೆ ಮನೆ ಯೊಳಗೆ ಪ್ರವೇಶ ಮಾಡುವಂತಹನಾಗು, ಪ್ರಸಕ್ತಿ ಬಂದಾಗ ಪ್ರಸ್ತಾಪಿಸಿ ನಿನ್ನನ್ನು ಆವ್ಹಾನಿಸುವೆ, ಆಗ ನೀನು ಆಗಮಿಸುವೆ ಯಂತೆ—ತದನಂತರ ಪೃಚ್ಛೆ ಮಾಡುವೆಯಂತೆ—

**ಶ್ಯಾಮು:—** ಆದರೆ ಯಮುನಾನ್ನ ಒಲಿಸುವದು—

**ವಸಂತ:—** ಇರಲಿ ಹೋಗೊ—ಹೊರಗ ಸಪ್ಪಳಾಯಿತು-ಬಂದರು ಕಾಣಿಸ ತದೆ.

**ಶ್ಯಾಮು:—** ಆದರೆ ಯಮುನಾನ್ನ—

**ವಸಂತ:—** ಯಮುನಾ-ಯಮುನಾ ! ನೀನು ಮೊದಲು ಬಾಯಿಯ ನ್ನಾದರೂ ಮುಚ್ಚು, ಇಲ್ಲ ಕಯ್ಯೊಳಗಿನ ಸೀರೆಯನ್ನಾದರೂ ಮುಚ್ಚು—

**ಶ್ಯಾಮು:—** (ಒಮ್ಮೆಲೆ ಸೀರೆಯಿದ್ದುದು ಸ್ಮರಣೆಗೆ ಬಂದು) ಅಯ್ಯಯ್ಯೊ ! (ಎಂದು ಒಳಕ್ಕೆ ಓಡಿ ಮತ್ತೆ ತಿರುಗಿ ಬಂದು) ಯಮುನಾನ್ನ—

**ವಸಂತ:**— (ಗಟ್ಟಿಯಾಗಿ) **ಸೀರೆ**–(ಶ್ಯಾಮ ಹೌಹಾರಿದವನಂತೆ ಒಳಗೆ ಹೋಗುವನು) (ಹೊರಗೆ ನೋಡಿ) ಓಹೊ–ಹಿಂದೂ ಮುಸಲ್ಮಾನರ ಐಕ್ಯ. (ಎಂದು ಕಿಸೆಯೊಳಗಿಂದ ಒಂದು ವೃತ್ತಪತ್ರವನ್ನು ಓದುವವನಂತೆ ಎದುರಿನ ಬಾಗಿಲು ಮತ್ತು ಮೇಜಿನ ನಡುವೆ ಕುಳಿತುಕೊಳ್ಳುವನು. ಕೆಲಹೊತ್ತಿನ ಮೇಲೆ ತಾತ್ಯಾಚಾರಿಯು ಆನಂದಾವೇಗವನ್ನು ತಡೆದ ದನಿಯಲ್ಲಿ "ಬರ್‍ರಿ, ಬರ್‍ರಿ, ಸಾಹೇಬರೆ" ಎನ್ನುತ್ತ ಹೊರಗಿನಿಂದ ಬರುವನು. ಅವನ ಹಿಂದಿನಿಂದ ನಬೀಸಾಹೇಬನು ಬರುವನು... ಕೊನೆಗೆ ಏನೊ ಒಂದು ಆಪತ್ತು ಮೈಮೇಲೆ ಬಿದ್ದಿದೆ ಎನ್ನುವ ಮುಖಚರ್ಯೆಯಿಂದ ಅಂತಪ್ಪನು ಬರುವನು. ಸಾಹೇಬರು ಕಾಲೊಳಗಿನ ಸ್ಲಿಪರುಗಳನ್ನು ತೆಗೆದಿಡುವರು. ಕಯ್ಯೊಳಗಿನ ಕೊಡೆಯನ್ನು ಎಲ್ಲಿಡಬೇಕೆಂದು ಅತ್ತಿತ್ತ ನೋಡುತ್ತಿರುವರು. ಅಂತಪ್ಪನು ತಾತ್ಯಾಚಾರಿಯ ಹಿಂದೆ ನಡೆದು ಬರುವನು.)

**ತಾತ್ಯಾಚಾರಿ:**—(ಎದುರಿನ ಕೋಣೆಯ ಕಡೆಗೆ ನಡೆಯುತ್ತಾ) ಹಂ .... ಕೂಡಿರಿ, ಸಾಹೇಬರೇ, ರಾಯರನ್ನು ಕರೆದುಕೊಂಡು ಬರುವೆ. (ಎಂದು ತಿರುಗಿ —ಸಾಹೇಬರು ಕೊಡೆ ಎಲ್ಲಿಡಬೇಕೆಂಬ ಪೇಚಿನಿಂದ ತೊಳಲಾಡುವದನ್ನು ಕಂಡು— ಸಿಟ್ಟಿನಿಂದ, ತನ್ನ ಹಿಂದಿನಿಂದಲೆ ನಡೆದು ಬಂದ ಅಂತಪ್ಪನಿಗೆ) ಏನ ನೋಡ್ತೀಯೊ, ಅಂತಪ್ಪಾ ! ಸಾಹೇಬರ ಕೊಡಿ ತೆಗೆದು ಇಡಬಾರದ ?

**ಅಂತಪ್ಪ:**— (ಮೆಲ್ಲಗೆ) ಪೂಜೆಗೆ ಅಂತ ತುಳಸೀದಳ ತಂದೀನಿ, ಇನ್ನೂ ಕಿಸೆದೊಳಗೆಯೆ ಅವೆ–

**ನಬೀಸಾಬ:**— ಇರಲಿ ಛೋಡೊ–ತಾತ್ಯಾಚಾರಿ. (ಎಂದು ಕೊಡೆಯನ್ನು ಕೆಳಗಿಟ್ಟು ಎಡದ ಗೋಡೆಗೆ ಕುಳಿತುಕೊಳ್ಳುವನು.)

**ತಾತ್ಯಾಚಾರಿ:**—(ಅಂತಪ್ಪನಿಗೆ, ಸಿಟ್ಟಿನಿಂದ, ಮೆಲುದನಿಯಲ್ಲಿ) ತುಳಸೀದಳಕ್ಕ ಮೈಲಿಗೆ ಇಲ್ಲಾ ಅನ್ನೋದು ಗೊತ್ತಿಲ್ಲ ನಿನಗೆ?. . ಕೆಲಸ ಎಲ್ಲ ಕೆಡಿಸಿಬಿಡುವಿ....ಹೋಗು ಆ ತುಳಸೀಪತ್ರ ಕಿವಿಯೊಳಗ ಇಟ್ಟುಕೊಳ್ಳಲಿಕ್ಕೆ! (ಅಂತಪ್ಪನು ಅತ್ಯಂತ ಆಶಾಭಗ್ನನಂತೆ ಬಲಬದಿಯ ಬಾಗಿಲಿನಿಂದ ಒಳಕ್ಕೆ ಹೋಗುವನು.) ಅಂ....ಸಾಹೇಬರ–ರಾಯರನ್ನ ಕರೆದುಕೊಂಡೆ ಬಂದೆ–ಒಂದು ನಿಮಿಷ–(ಒಮ್ಮೆಲೆ ವಸಂತನನ್ನು ನೋಡಿ) ಏ,ಒಳಗ ಇದ್ದಾರೇನೊ ರಾಯರು ? (ಉತ್ತರದ ಅಪೇಕ್ಷೆಯಿಲ್ಲದೆ ಎದುರಿನ ಕೋಣೆಯೊಳಗೆ ಹೋಗುವನು.)

**ನಬೀಸಾಬ:—** ಇರಲಿ ಥೋಡೊ—ತಾತ್ಯಾಚಾರೀ. (ವಸಂತನು ಮುಖವೆತ್ತಿ ತನ್ನನ್ನು ನೋಡಲು) ತುಂ ಕ್ಯಾ ತಾತ್ಯಾಚಾರೀಕಾ ಬೇಟಾ?

**ವಸಂತ:—** (ಉಸಿರೆಳೆದು) ಅಲ್ಲ-ಅವರು ನನ್ನ ಹಿಂದಿನ ಜನ್ಮದ ಶತ್ರು-ನಾನು ಅವರ ಮುಂದಿನ ಜನ್ಮದ ಶತ್ರು. (ಎಂದು ಮತ್ತೆ ಓದುವವನಂತೆ ನಟಿಸುವನು.)

''ಇದೇನು ಅಲಭ್ಯ ಲಾಭ!'' ಎನ್ನುತ್ತ ದೊಡ್ಡರಾಯರೂ ಅವರ ಹಿಂದಿನಿಂದ ತಾತ್ಯಾಚಾರಿಯೂ ಬರುವರು.

**ದೊಡ್ಡರಾಯರು:—** (ನಗೆಯಿಂದ) ಏನು, ಸಾಹೇಬರೆ, ಹಾದೀ ತಪ್ಪಿತೇನು ಈ ಹೊತ್ತು? ಇದೇನು—ಮೇಲಕ್ಕೆ ಬರ್ರಿ-

**ನಬೀಸಾಬ:—** ಇರಲಿ ಥೋಡೊ, ರಾಯರು (ಎಂದು ಮೇಜಿನ ಸಮೀಪಕ್ಕೆ ಬರುವನು. ಇಷ್ಟರಲ್ಲಿ ದೊಡ್ಡರಾಯರು ಮೇಜಿನ ಹಿಂದು **ಕುಳಿತುಕೊಳ್ಳುವರು**.)

**ತಾತ್ಯಾಚಾರಿ:—** ಹಾದೀ ತಪ್ಪಿ ಯಾಕೆ? (ಎಂದು ವಸಂತ ಮತ್ತು ದೊಡ್ಡರಾಯರ ನಡುವೆ **ಕುಳಿತುಕೊಂಡು**.) ನನಗೂ ಸಾಹೇಬರಿಗೂ ಒಂದು ವಿಷಯ ವಾದಕ್ಕ ಬಿದ್ದಿತು. ಈ ವರ್ಷದ ಇಲೆಕ್ಶನ್‌ಗೆ ಸಾಹೇಬರು ಆಸ್ಥಾನೇ ತೋರಿಸಲಿಲ್ಲ—ಯಾಕೆ? ಅಂತ ನಾನೇ ಹೋಗಿದ್ದೆ.... (ನಗೆಯಿಂದ) ಆದರೆ ಸಾಹೇಬರು ನಮ್ಮ ರಾಯರ ಮ್ಯಾಲೆ ಸಿಟ್ಟಾಗಿದ್ದರು!

**ನಬೀಸಾಬ:—** (**ತೊಡಕಿನಲ್ಲಿ ಬಿದ್ದವನಂತೆ**) ಇರಲಿ ಥೋಡೊ—ತಾತ್ಯಾಚಾರಿ. ಸಿಟ್ಟ ಕಿದರಸೇ-

**ದೊಡ್ಡರಾಯರು:—** (ಆಶ್ಚರ್ಯ ತೋರಿಸಿ) ಏನು? ನಮ್ಮ ಮೇಲೆ ಸಾಹೇಬರ ಸಿಟ್ಟು? ಇದೇನು ಸಾಹೇಬರೇ? ನಿಮ್ಮ ಸ್ಪೇಶಲ್ ವಾರ್ಡಿನೊಳಗ ನೀವೇ ಉಮೇದವಾರರಾಗಿ ನಿಂತಿರಿ—ನಮ್ಮವರೇ ಒಬ್ಬರೂ ಅಂತ ತಿಳಿದುಕೊಂಡು—ನಾನು ನಮ್ಮ ಟಾಂಗಾವಾಲಾ ಇಮಾಂ ಸಾಹೇಬಗೆ ಬುದ್ಧಿ ಹೇಳಿ ಬಿಡಿಸಿದೆ-ತಾನೂ ನಿಲ್ಲಬೇಕಂತಿದ್ದ ಅವ—

**ತಾತ್ಯಾಚಾರಿ:—** (ನಡುವೆಯೆ) ಅದೇನು ಸಾಹೇಬರಿಗೆ ಗೊತ್ತಿಲ್ಲ? ಆದರೆ ಸಾಹೇಬರ ಸಿಟ್ಟು ಬೇರೆ ಕಾರಣಕ್ಕೆ....

**ನಬೀಸಾಬ:—** ಇರಲಿ ಥೋಡೊ–ತಾತ್ಯಾಚಾರೀ–

**ದೊಡ್ಡರಾಯರು:—** ಅದೇನು–?

**ನಬೀಸಾಬ:—** (ತಾನೇ ಮುಂದಾಗಿ) ಏ ದೇಖೊ, ದೊಡ್ಡರಾಯಸಾಬ್; ಇದ್ದ ಬಾತ ಬೋಲನೇಕೊ ನಮುಗೆ ಡರ್ ಎಲ್ಲಿ ಅದಾವ್ ? ದೊಡ್ಡರಾಯ ಸಾಬ್ರು ಹೊಲೇ ಲೋಕೋಕಾ ಔರ್ ಮಾದಗ ಲೋಕೋಕಾ ಪಿಛೆ ಕಟ್ಟಿದರು ಕರಕೆ ಸುದ್ದಿ ಆಗಯಿ ಹಮಾರೇತಕಾ. ಓ ಹೊಲೇ ಔರ್ ಮಾದಗ ಲೋಕ ಬಡೇ ಹೊಲಸ ಕಾಮು ಕರನೇವಾಲೇ. ಆ ಲೋಕೊಕೀ ನಜರ ಭೀ ನಡ್ಯಾಕಿಲ್ಲ ನಮುಗ, ದೊಡ್ಡರಾಯ ಸಾಬ್. ಇದ್ದ ಬಾತ ಬೋಲನೇಮೇ–

**ತಾತ್ಯಾಚಾರಿ:—** (ನಡುವೆಯೆ) ಅಲ್ಲ, ರಾಯರೆ, ನಾನು ಎಷ್ಟು ಹೇಳಿದರೂ ವಿಶ್ವಾಸ ಕೂಡಬಾರದೆ ಸಾಹೇಬರಿಗೆ? ಅಲ್ಲ––ಹೊಲೆಯರು ಎಲ್ಲಿ ? ನಾವೆಲ್ಲಿ ? ಅವರಿಗೂ ನಮಗೂ ಸಂಬಂಧ ಏನು ?

**ನಬೀಸಾಬ:—** ಹೊಲೇರ ನಹಿ, ತಾತ್ಯಾಚಾರೀ, ಅದೇನೊ ಹರಿಜನ ಕತೆ–

**ದೊಡ್ಡರಾಯರು:—** (ನಡುವೆಯೆ ಒಮ್ಮೆಲೆ ಯೋಚನೆ ಹೊಳೆದವರಂತೆ) ಓಹೊ ! ತಿಳಿಯಿತು. ಯಾರೊ ಹೊಟ್ಟೆಕಿಚ್ಚಿನವರು ಸಾಹೇಬರಿಗೆ ಸುಳ್ಳು ಸುದ್ದಿ ಮುಟ್ಟಿಸಿರಬೇಕು.

**ನಬೀಸಾಬ:—** ಇರಲಿ ಥೋಡೊ, ದೊಡ್ಡರಾಯಸಾಬ್, ಸುಳ್ ರಹೇತೋ ಸುಳ್—

**ದೊಡ್ಡರಾಯರು:—** ಅಲ್ಲ, ಸಾಹೇಬರೆ, ಇರಲಿ ಬಿಡು ಅಂದರ ಹೇಗೆ ನಡೆದೀತರಿ—

**ತಾತ್ಯಾಚಾರಿ:—** (ನಡುವೆಯೆ) ನಾನೂ ಅದನ್ನೇ ಹೇಳಿದೆ—

**ದೊಡ್ಡರಾಯರು:—** ಅಲ್ಲ—ಹತ್ತಿಪ್ಪತ್ತು ವರ್ಷ ಸಾರ್ವಜನಿಕ ಕೆಲಸ ಮಾಡಿ ನಮ್ಮವರು ಯಾರು ಅನ್ನೋದು ನನಗೆ ಗೊತ್ತಿಲ್ಲ ? ಅಲ್ಲ, ಮುಸಲ್ಮಾನ ಬಂಧುಗಳು ನಮ್ಮ ನೆರೆಮನೆಯವರು, ನಮ್ಮಂತೆ ಧರ್ಮದಲ್ಲಿ ಶ್ರದ್ಧಾ ಇದ್ದವರು, ಸ್ವಭಾವದಿಂದ ಸರಳಪ್ರಾಮಾಣಿಕರು; ನಮ್ಮ ದೇಶದ ಉನ್ನತಿಗೆ ಅಂದರೆ ನಾವೂ ಅವರೂ ಎಡಗೈ ಬಲಗೈ

ಇದ್ದಹಾಗೆ......ಅವರನ್ನು ಬಿಟ್ಟುಕೊಟ್ಟು ಎಂದಿನಿಂದಲೂ ನಮ್ಮ ಕಾಲೊಳಗಿನ ಮುಳ್ಳಿನ ಹಾಗ ಇದ್ದ ಹೊಲೆಯರ ಜೋಡಿ ಕಟ್ಟತೀನೇ ನಾನು?

**ನಬೀಸಾಬ:—** ಹೊಲೇರ ನಹಿ, ದೊಡ್ಡರಾಯಸಾಬ್, ಓ ಹರಿಜನ ಕತೆ—

**ತಾತ್ಯಾಚಾರಿ:—** (ಸಿಟ್ಟಿನಿಂದ) ಎಲ್ಲಾ ಒಂದೇ ಮುಂಡೇಮಕ್ಕಳೇ.

**ದೊಡ್ಡರಾಯರು:—** ಛೆ-ಛೆ-ಸಾಹೇಬರೆ, ನಿಮ್ಮಂಥವರು ವಿಶ್ವಾಸ ಇಡಬಾರದು ಈ ಮಾತಿನೊಳಗೆ? ಈಗಾದರೂ ಏನಾಯಿತು? ಇನ್ನೂ ನಿಮ್ಮ ವಿಶ್ವಾಸ ಆದೆ ಅಂತ ಹೇಳಿರಿ, ಇಲ್ಲಿಂದಿಲ್ಲೇ ಬಿಟ್ಟುಕೊಡತೀನಿ ನನ್ನ ಉಮೇದವಾರಕೀ.

**ನಬೀಸಾಬ:—** ಛೆ-ಇರಲಿ ಛೋಡೊ-ದೊಡ್ಡರಾಯ್‌ಸಾಬ್.

**ದೊಡ್ಡರಾಯರು:—** (ಕಳಕಳಿಯ ಆವೇಶದಿಂದ) ಆದಲ್ಲ, ಸಾಹೇಬರೆ; ಆದರೆ ಎಂದಿನಿಂದ ಹಿಂದು-ಮುಸಲ್ಮಾನರ ಐಕ್ಯಕ್ಕಾಗಿ ಜೀವದ ಹಂಗಿಲ್ಲದೆ ಹೆಣಗಾಡಿದ ನಾನು ಮುಪ್ಪಿನೊಳಗ ಮೂರ್ಖ ಆದೆ ಅಂತ- ನಿಮ್ಮಂಥಾ ನನ್ನ ಹಿತಮಿತ್ರರಿಗೆ ಕಲ್ಪನೆಯಾಗೋದು ಬೇಡ. Election ದಲ್ಲಿ ಗೆದ್ದು ನಾನು ಹೆಚ್ಚಿಗೆ ಮಾಡೋದಾದರೂ ಏನು? ನಾನು election ಕೆ ನಿಲ್ಲದ ಪಕ್ಷದಲ್ಲಿ ಹಿಂದು - ಮುಸಲ್ಮಾನರ ಬಂಧುಭಾವ ಬೆಳೆಯೋ ಹಾಗಿದ್ದರೆ-

**ತಾತ್ಯಾಚಾರಿ:—** (ನಡುವೆಯೆ) ಒಂಟಕಾಲಿನ ಮ್ಯಾಲೆ ಸಿದ್ಧ ಇದ್ದಾರೆ, ಅಂಪೆ, ರಾಯರು; ಒಂಟ ಕಾಲಿನ ಮ್ಯಾಲೆ. ಆದರೆ, ಸಾಹೇಬರ, ಆರಿಸಿ ಬಂದರೆ ನಿಮ್ಮೆಲ್ಲರ ಆಶೀರ್ವಾದದಿಂದಲೆ ಆರಿಸಿ ಬರಬೇಕೆ ಹೊರತು-

**ದೊಡ್ಡರಾಯರು:—** ತಾತ್ಯಾಚಾರೀ, ಅವರಿಗೇನು ಗೊತ್ತಿಲ್ಲ ಅಂತ ಹೇಳಿ ಹೊತ್ತು ಕಳೆಯುವೆಯಾ? ಹೋಗು-ಬಂದಿಷ್ಟು ಚಹಾ- (ತಾತ್ಯಾಚಾರಿಯು ಏಳುವನು.)

**ನಬೀಸಾಬ:—** ಛೆ-ಇರಲಿ ಛೋಡೊ-ತಾತ್ಯಾಚಾರೀ-ಇರಲಿ ಛೋಡೊ.

(ಲಗಬಗೆಯಿಂದ ಅಂತಪ್ಪನು ಬರುವನು)

**ಅಂತಪ್ಪ:**— ರಾಯರ, ಮತ್ತೆ ಮಾತಿನೊಳಗ ಮರೆತೀತು ಅಂತ ಒಂದೆ. ಈ ಹೊತ್ತು ಸಂಜೆಯ ಪಾರ್ಟೀಗೆ ಸಾಹೇಬರು ಬರಬೇಕು-ನೆವ ಹೇಳಿ ತಪ್ಪಿಸುವ ಹಾಗಿಲ್ಲಾ ಅಂದೆ.

**ದೊಡ್ಡರಾಯರು:**— (ನಗೆಯಿಂದ) ಕೇಳಿದಿರಾ, ಸಾಹೇಬರೆ ?

**ತಾತ್ಯಾಚಾರಿ:**— ಕೇಳೋದಿಲ್ಲ, ಹೇಳೋದಿಲ್ಲ. ಆರೂವರೆ ಗಂಟೆಗೆ ಇಲ್ಲಿ ಇರಲೇಬೇಕು....

**ನಬೀಸಾಬ:**— ಆರೂಅರೆ-ಸಾಡಾ ಆರು ? (ತಾತ್ಯಾಚಾರಿಯು ತಲೆದೂಗುವನು) ಮಾಫಕರನಾ, ದೊಡ್ಡರಾಯ್ ಸಾಬ್. ಅಂತಪ್ಪಾಕೋ ಮಾಲೂಮ್ ಐತಿ-ಪುಛೊ. ಸಾಡಾಆರ್ ನಮಾಜ ಪಡನೇಕೀ ಬಖತ್-

**ದೊಡ್ಡರಾಯರು:**— (ನಗೆಯಿಂದ) ಅಂತೂ ಸಾಹೇಬರಿಗೆ ನಮ್ಮಲ್ಲಿ ಚಹಾ ನಡಿಯೋದಿಲ್ಲ ಅಂದ ಹಾಗಾಯ್ತು-

**ನಬೀಸಾಬ:**— (ಎದ್ದು) ಗೈರಸಮಝು ಬ್ಯಾಡ, ದೊಡ್ಡರಾಯ ಸಾಬ್.... ಮತ್ರೊಮ್ ಬಖತ್, ಮತ್ರೊಮ್ ಬಖತ್-(ಎಂದು ಬಾಗಿಲವರೆಗೆ ಹೋಗಿ ತಿರುಗಿ ಬಂದು) ಓ-ತುಮಾರಾ ಇಮಾಂಸಾಬ್—

**ದೊಡ್ಡರಾಯರು:**— ಛೆ-ಅವನ ಹೆದರಿಕೆ ಬೇಡ ನಿಮಗೆ. ಅವನ vote ಸಹಿತ ನಿಮಗೆಯೆ-ಯಾಕೊ, ವಸಂತಾ, ನೀ ಇದ್ದೆಯಲ್ಲ ನಾನು ಅವನಿಗೆ ಹೇಳುವಾಗ ?

**ವಸಂತ:**— (ಒಮ್ಮೆಲೆ ನಿದ್ದೆಯಿಂದ ಎಚ್ಚತ್ತವನಂತೆ) ಆಂ.. ಓಹೊ-ನನಗೆ ಗೊತ್ತಿಲ್ಲ ನಮ್ಮ ದೊಡ್ಡರಾಯರು ಹಿಂದೂ-ಮುಸಲ್ಮಾನರ ಐಕ್ಯಕ್ಕೆ ಎಷ್ಟು ಹೆಣಗಾಡುವರೆಂಬುದು ? ಮುನಿಸಿಪಾಲ್ಟಿಯ ಪ್ರೆಸಿಡೆಂಟರಾದಾಗಿ ನಿಂದಂತೂ ನಮ್ಮ ರಾಯರು ಮುಸಲ್ಮಾನ ಬಂಧುಗಳ ಹಿತದ ಸಲು ವಾಗಿ-ಒಮ್ಮೊಮ್ಮೆ ತಮ್ಮ ಜನರಿಗೆ ಕೂಡ ಕೆಟ್ಟ ಆಗಬೇಕಾಯಿತು ಅವರಿಗೆ. ಊರೊಳಗಿನ ಬೀದಿಗಳೆಲ್ಲಾ ಕೆಟ್ಟು ಕೆಟ್ಟು ದೂಳಿಯಿಂದ ತುಂಬಿದವೂ ಅಂತ ಎಷ್ಟು ಜನರ ಆಕ್ಷೇಪ ! ಆದರೂ-ಟಾಂಗಾ ಹೊಡೆಯುವವರೆಲ್ಲಾ ಮುಸಲ್ಮಾನ ಬಂಧುಗಳೇ ಇರುವರೆಂದೂ,

ದೂಳು ಮುಸುಕಿದರೆ ಟಾಂಗಾದಲ್ಲಿ ಎಷ್ಟು ಜನರನ್ನು ಕೂಡಿಸಿದೆ, ಅದಕ್ಕೆ ದೀಪ ಹಚ್ಚಿದೆಯೊ ಇಲ್ಲೊ-ಎಂಬುದು ಪೋಲೀಸರಿಗೆ ತಿಳಿಯುವದಿಲ್ಲವೆಂದು--ಹಾಗೆಯೆ ಬೀದಿಯ ದೂಳು ದಿನೇ ದಿನೇ ಬೆಳೆಯುವಂತೆ—

**ತಾತ್ಯಾಚಾರಿ:**— (ಸಿಟ್ಟಿನಿಂದ) ಏ-ವರ್ತಮಾನಪತ್ರ ಗಟ್ಟಿ ಗಟ್ಟಿಸಿ ಓದ ಬಾರದು ನಾಲ್ಕು ಜನ ಇದ್ದಾಗ ಅಂತ ತಿಳಿಬಾರದೇನೋ ?

**ನಬೀಸಾಬ:**— ಇರಲಿ ಥೋಡೊ, ತಾತ್ಯಾಚಾರಿ. ನ್ಯೂ ಮತ್ರೊನ್ ಬಖತ್ ಆತಾಹು–(ಎಂದು ನಮಸ್ಕರಿಸುತ್ತ ಹೊರಬೀಳುವನು).

ದೊಡ್ಡರಾಯರು ವಸಂತನಿಗೆ ಏನೊ ಹೇಳಬೇಕೆನ್ನುವಷ್ಟರಲ್ಲಿ ಅಂತಪ್ಪನು ಹೊರಬಾಗಿಲಿಗೆ ಹೋಗಿ ಜೋಳ್ಳೆಂದು ನಗುವನು. ಎಲ್ಲರೂ ಆಶ್ಚರ್ಯದಿಂದ ಅವನನ್ನು ನೋಡುವರು.

**ಅಂತಪ್ಪ:**— (ನಗೆ ತಡೆಯುತ್ತ) ಅಲ್ಲ–ಈ ಜನರು ಎಂದು ಸುಧಾರಿಸಬೇಕೂ ಅಂತೀನಿ ! "ಪಾರ್ಟಿಗೆ ಬಾ" ಅಂದರ ಸಮಾಜ ಕೇಳೋದು–ಅದಕ್ಕಾ ಆಗೋದಿಲ್ಲ ಅಂತ ! ದೇವರು ತಾನಾಗಿಯೆ ಮಾತಾಡಿಸುವಾಗೂ ಸಮಾಜ ಅಂತ ಇವರು ನೆಲಕ್ಕೆಯೆ ಮುಖ ಹಚ್ಚುವವರು ! ಕಠಿಣ ಇಂಥವರ ಜೋಡಿ ಸಹ. (ಎಂದು ಮತ್ತೆ ನಗುವನು. ಎದುರು ಒಳಗೆ ನೋಡಿ ಕಕ್ಕಾವಿಕ್ಕಿಯಾಗುವನು. ಒಳಗಿನಿಂದ ವೇಣಕ್ಕ ಬರುವಳು.)

**ವೇಣಕ್ಕ:**— (ಸಿಟ್ಟಿನಿಂದ) ನಗತೀರೇನು ? ಅವ ಮುಸಲ್ಮಾನ ಆದರೂ ನಿಮ್ಮ ನಡತೇನೇ ವಿಪರೀತ....ಅವನಿಂದಾದರೂ ಬುದ್ಧಿ ಕಲಿತು–ಇಷ್ಟು ಊಟದ ಮುಂಚೆ ಸಂಧ್ಯಾವಂದನೆ-ಪೂಜೆಮಾಡಿರಿ ನೋಡೋಣ.

(ಹೊರಗಿನಿಂದ ನಬೀಸಾಬನು ಓಡುತ್ತ ಬರುವನು)

**ನಬೀಸಾಬ:**— ಅರೆರೆ-ಘಟಾರಮೇ ಥೋಕರಾ ಪಡಗಯಾ, ದೊಡ್ಡರಾಯಸಾಬ್ !

**ಅಂತಪ್ಪ:**— ಹೋಗೋವಾಗ ಎತ್ತಿಟ್ಟು ಹೋಗಿರಿ, ಸಾಹೇಬರೆ.

**ನಬೀಸಾಬ:**— (ಸಿಟ್ಟಿನಿಂದ ಅವನನ್ನು ಕೆಕ್ಕರಿಸಿ) ಎತ್ತಿಟ್ ಗಿತ್ತಿಟ್ ಹಮ್‌ಕು

ನಹೀ ಮಾಲೂಮ್. ಓ ತುಮಾರಾ ಹೊಲೇ ಲೋಕೊಕಾ ಛೋಕರಾ ಹೈ. (ಎಂದು ದರ್ಪೋದ್ಧತನಂತೆ ಹೋಗುವನು.)

**ತಾತ್ಯಾಚಾರಿ:**— ಹುಂ-ಏನು ಮಡಿ ಮುಸಲಸಮ ?

**ವೇಣಕ್ಕ:**— (ಸಂಶಯದಿಂದ) ಏನಂತ ಹೇಳಿದ ?

**ಅಂತಪ್ಪ:**— ಏನೊ-ಗಟಾರದೊಳಗ ಕೂಸು ಬಿದ್ದಿದೆ ಅಂತ—

**ವೇಣಕ್ಕ:**— (ಕಳಕಳಿಯಿಂದ) ಅಯ್ಯೊ-ಯಾರಾದರೂ ಎತ್ತಬಾರದ ಅದನ್ನ ?

**ತಾತ್ಯಾಚಾರಿ:**— ಏನಾಗೋದು ನಡೀರಿ, ವೇಣಕ್ಕಾ ? ಹೊಲೆಯರದಂತ ಆ ಕೂಸು ?

**ವೇಣಕ್ಕ:**— (ಕಳಕಳಿ ಹೆಚ್ಚಾಗಿ) ಅಯ್ಯೊ-ಹೊಲೆಯರದಾದರೇನ್ ಹೊಟ್ಟಿ ಹತ್ತೋದಿಲ್ಲ ? ಮುಂದಾಗಿ ನೋಡಬಾರದ ಇಷ್ಟು ಗಂಡಸರು ಕೂತೀರಿ. (ಎಂದ. ಹೊರಬಾಗಿಲಿಗೆ ನಡೆದು ಬರುವಳು.)

**ದೊಡ್ಡರಾಯರು:**— (ಸಿಟ್ಟಿನಿಂದ) ಏ-ನಿನಗೇನ್ಮಾಡೋದು ಹೊರಗಿನ ಕಾರಭಾರ ?

**ವೇಣಕ್ಕ:**— (ಹೊರಗೆ ನೋಡುತ್ತ) ಅಯ್ಯೊ-ಸಾಯೋದೋ ಏನ ಮಣ್ಣೋ ? ಪಾಪ ! ರಕ್ತ ಸುರೀತದ-ಒಂದಿಷ್ಟು ನೀರು ತಕ್ಕೊಂಡು ಬರ್ರಿ ಯಾರಾದರೂ-ನಾ-ಹಿಡಿದಿರತೀನಿ ಕೂಸಿನ್ನ (ಎಂದು ಹೊರಗೆ ಲಗಬಗೆಯಿಂದ ಹೋಗುವಳು.)

**ಅಂತಪ್ಪ:**— (ಬಾಗಿಲವರೆಗೆ ಓಡುತ್ತ ಬಂದು) ಎಲೆಲೆ – ಹೊಲೆಯರದು, ವೇಣಕ್ಕಾ, ಆ ಕೂಸು-ವೇಣಕ್ಕಾ, ಮಡೀಲೆ ಇದ್ದಿರಿ ನೀವು-ಮುಟ್ಟಬೇಡಿರಿ.

**ತಾತ್ಯಾಚಾರಿ:**— ಯಮುನಾನ್ನಾದರೂ ಕಳಿಸೋಣ. ಯಮುನಾ-

**ವಸಂತ:**— ಶ್ಯಾಮಾ-

(ಶ್ಯಾಮನು ಯಮುನಾನ ಕೈಹಿಡಿದುಕೊಂಡು ಬರುವನು)

**ಶ್ಯಾಮ:**— ಅಪ್ಪಾ—

**ದೊಡ್ಡರಾಯರು:**— (ಅವರಿಬ್ಬರನ್ನು ನೋಡಿ) ಎಲೆ-ಇದೇನೊ ?

**ಶ್ಯಾಮ:**— ಅಪ್ಪಾ, election ದ ದಿವಸ ಹರಿಜನವಾರ ಅಂತ ಪಾಲಿಸಿ—

**ದೊಡ್ಡರಾಯರು:—** (ಗದ್ದರಿಸಿ) ಅವಳ ಕೈ ಯಾಕೆ ಹಿಡಿದಿರುವೆಯೋ ?

**ತಾತ್ಯಾಚಾರಿ:—** (ನೋಡಿ) ಎಲೆ ! (ದಂಗುಬಡೆದವನಂತೆ ನಿಲ್ಲುವನು)

**ಅಂತಪ್ಪ:—**(ಹೊರಗೆ ನೋಡುತ್ತಲೆ) ಯಾರಾದರೂ ಬಂದಿಷ್ಟು ನೀರು—ಬೇಗ—

**ವಸಂತ:—** (ತಟ್ಟನೆ ಎದ್ದು) ಹುಂ—ಬಂದೆ. ರಾಯರೆ, ನಿಮ್ಮ ಶ್ಯಾಮನದೂ ಯಮುನಾಳದೂ ಮದಿವೆ—ನಾಡದು (ಎಂದು ಒಳಗೆ ಓಡುವನು)

**ದೊಡ್ಡರಾಯರು:—** (ಸಿಟ್ಟಿನಿಂದ) ಏ ಮೂರ್ಖಾ, ನಿನ್ನ ಬುದ್ಧಿ ಎಲ್ಲಿದೆ ?

**ತಾತ್ಯಾಚಾರಿ:—** (ಯಮುನಾಗೆ) ಏ, ಬಿಡು ಅವರ ಕೈ.

**ಶ್ಯಾಮ:—** ನೀವೇನು ಮಾಡಿದರೂ ನಾನು ಅವಳನ್ನು ಮದಿವೆ ಆಗುವೆ. (ವಸಂತನು ನೀರಿನ ಪಾತ್ರೆಯನ್ನು ತರುವನು) ವಸಂತಾ, ಇದೇ ನನ್ನ ನಿಶ್ಚಯ. ಅಲ್ಲವೆ ?

**ತಾತ್ಯಾಚಾರಿ—:** (ಶ್ಯಾಮನಿಗೆ) ಅಯ್ಯೋ, ನಿಮ್ಮ ಧರ್ಮ ಎಲ್ಲಿ ಹೋಯ್ತು, ರಾಯರ ?

**ದೊಡ್ಡರಾಯರು:—** ಹಾಳಾಯ್ತು ಧರ್ಮ........ಮೂರ್ಖಾ ನನ್ನ election ದ ಗತಿ ಏನು ?

**ಅಂತಪ್ಪ:—** (ಹೊರಗೆ ನೋಡುತ್ತಲೆ ಗಾಬರಿಯ ದನಿಯಿಂದ) ರಾಯರ, ಹೇಣಕ್ಕ ಕೂಸಿನ್ನ ಮುಟ್ಟಿ ಎತ್ತಿದ್ದು ಮಂದಿ ನೋಡಿದರು, ರಾಯರೆ, ಮಂದಿ ನೋಡಿದರು.

**ತಾತ್ಯಾಚಾರಿ:—**ಅಯ್ಯಯ್ಯೊ—ರಾಯರೆ, ಹೊರಗ ಅನರ್ಥ—ಒಳಗ ಅನರ್ಥ!

**ಅಂತಪ್ಪ:—** (ಒಮ್ಮೆಲೆ ತಿರುಗಿ) ಅಂ—ಏನು ?

**ವಸಂತ:—** ಶ್ಯಾಮ—ಮತ್ತು ಯಮುನಾನ ಮದಿವೆ--ಹರಿಜನವಾರದ—ಮುಹೂರ್ತದಲ್ಲಿ.

**ಅಂತಪ್ಪ:—** (ಬೆದರಿ ಓಡಿ ಬಂದು) ರಾಯರ, ರಾಯರ, ಇದೇನ ಅನರ್ಥ ?

**ದೊಡ್ಡರಾಯರು:—** (ಹಣೆ ಗಟ್ಟಿಸಿಕೊಂಡು) ನನ್ನ election ಹಾಳು !

**ತಾತ್ಯಾಚಾರಿ:**— ಧರ್ಮ ಹಾಳಾಯ್ತು, ರಾಯರ, ಧರ್ಮ ಹಾಳಾಯ್ತು ಮಾಡೋದೇನು ?

**ಅಂತಪ್ಪ:**— (ಹೌಹಾರಿದವನಂತೆ) ಹೀಂಗಾದರ – ( ಹಣೆ ಬಡೆದುಕೊಳ್ಳುತ್ತ) ಹೀಂಗಾದರ ಮಾಡೋದೇನು - ಮಾ ಡೋ ದೇ ನೂ ಅ ಂ ತೀ ನಿ .

**ವಸಂತ:**— (ಬಾಗಿಲಿಗೆ ತಿರುಗಿ ನಿಂತು) ಮಾಡೋದೇನು–ಹೇಳಲೇನು, ಅಜ್ಜ ? (ಎಲ್ಲರೂ ಅವನನ್ನು ದಿಟ್ಟಿಸುವರು.)

ಹರಿ ಜನವಾರ—ಅಂತೀಸ;

ಮಾವಾ, ಹರಿ ಜನ್ವಾರ;

ಅಜ್ಜ, **ಹರಿ ಜನ್ವಾರ.**

ಎಂದು ನೀರಿನ ಪಾತ್ರೆ ತೆಗೆದುಕೊಂಡು ಹೊರಗೆ ಹೋಗುವನು. ಶ್ಯಾಮನು ಯಮುನಾಳನ್ನು ಮುಗುಳ್ನಗೆಯಿಂದ ನೋಡುವನು. ದೊಡ್ಡರಾಯರು ಹಣೆ ಬಡೆದುಕೊಳ್ಳುವರು, ತಾತ್ಯಾಚಾರಿಯು ಗಲ್ಲ – ಗಲ್ಲ ಬಡೆದುಕೊಳ್ಳುವನು. ಅಂತಪ್ಪನು ವಸಂತನು ಹೋದತ್ತ ಬಾಯಿ ತೆರೆದು ನಿಲ್ಲುವನು.

(ತೆರೆ)

ಮೂರನೆಯ ಎಳೆ ಹರಿದುದು